ತನ್ನ ಸರ್ವಸ್ವವನ್ನೂ ಪತಿಯು ಸುಖಕ್ಕಾಗಿ
ತ್ಯಾಗಮಾಡಿದ ಸಾಧ್ವಿಯೋರ್ವಳ ಜೀವನ
ವನ್ನು ನಿರೂಪಿಸುವ ಕಥಾವಸ್ತುವಿನಿಂದ
ಕೂಡಿದ ಸಾಮಾಜಿಕ ಚಿತ್ರ



ಗಣಪತಿ ಪಿಕ್ಚರ್ಸ್‌ರವರ

# ದೇವಕಿ (ತಮಿಳು)

ಭೂಮಿಕೆಯಲ್ಲಿ: ಮಾದುರಿದೇವಿ; ಜಾನಕಿ; ಲಲಿತ; ಪದ್ಮಿನಿ; ರಾಗಿಣಿ;
ಕುಮಾರಿ ಕಮಲಾ; ಬಾಲಚಂದರ್; ನಂಬಿಯಾರ್; ಕಣ್ಣಪ್ಪ ಮುಂತಾದವರು

ಬೆಂಗಳೂರು: **ಗೀತಾ ಮತ್ತು ಶ್ರೀ**

ಮೈಸೂರು: ಚಾಮುಂಡೇಶ್ವರಿ; ಮಂಗಳೂರು: ನ್ಯೂ ಚಿತ್ರ;
ದಾವಣಗೆರೆ: ಮೋತಿ ಟಾಕೀಸುಗಳಲ್ಲಿ

---

DISTRIBUTORS FOR MYSORE STATE CANARA & COORG

## TALLAM PICTURES CIRCUIT

**48, Gandhinagar, BANGALORE - 2** **6/30, Edward Elliots Road, MADRAS - 4**








ವಿವರಗಳಿಗೆ: ಪ್ರಕಾಷ್ ಪ್ರೊಡಕ್ಷನ್ಸ್ : ಶಾಂಥೋಮ್, ಮದ್ರಾಸು-4

ಐ. ಟಿ. ಎಲ್. ಗ್ರೈಪ್ ಸಿರಪ್

ನಿಮ್ಮ ಮುದ್ದು ಕಂದನ
ಅಜೀರ್ಣ ವ್ಯಾಧಿಗಳನ್ನು ತಡೆದು
ಆರೋಗ್ಯ ಕಾಪಾಡುವ ಅಮೃತವಾದ

—— ತಯಾರಕರು : ——

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೊರೇಟರಿ ಲಿಮಿಟೆಡ್.**

ಮಲ್ಲೇಶ್ವರಂ ಪೋಸ್ಟ್, ಬೆಂಗಳೂರು 3



ಶ್ರೇಷ್ಠತೆಯ
ಹೆಗ್ಗುರುತು



# ಗ್ರೈಪ್ ಸಿರಪ್



**ಪೆಪ್ಪರಮೆಂಟುಗಳು ಮಕ್ಕಳಿಗೆ ಸಿಹಿ!**
**ಮಕ್ಕಳೆಂದರೆ ತಾಯಂದರಿಗೆ ಸಿಹಿ!**

ಸಿಹಿಯುಳ್ಳ ಪ್ಪೆಪರಮೆಂಟುಗಳು




ಯವರದೇ



**M.A.P. INDUSTRIES**
**TONDIARPET, MADRAS.21**



# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ

ಒಂದು ಮೈನಾಹಕ್ಕಿಯ ಮಧುರಸ್ವರಕ್ಕೆ ಮುಗ್ಧನಾಗಿ ಒಬ್ಬಾತನು ತುಂಬಾ ಹಣ ಕೊಟ್ಟು ಅದನ್ನು ಕೊಂಡುಕೊಂಡ. ಪಂಜರದಲ್ಲಿಟ್ಟು ಭದ್ರವಾಗಿರಿಸಿದ. ಆಲಾಗಾಯ್ತು ಅದು ತುಂಬಾ ವ್ಯಸನ ಪೀಡಿತವಾಗಿರುವಂತೆ ಕಾಣಿಸಿತು. ಕ್ರಮೇಣ ಹಾಡು ಹಾಡುವುದನ್ನೂ ನಿಲ್ಲಿಸಿಬಿಟ್ಟಿತು. ಇದನ್ನು ನೋಡಿ ಯಜಮಾನನಿಗೆ ತಾನು ಅನುಭವಿಸಿದ ಸೆರೆಮನೆಯ ವಾಸ ಜ್ಞಾಪಕಕ್ಕೆ ಬಂತು. ಕೂಡಲೇ ಪಂಜರವನ್ನು ಕೈಯಲ್ಲಿ ಹಿಡಿದುಕೊಂಡು ಊರಾಚೆಗೆ ಹೊರಟ. ಪಂಜರದ ಬಾಗಿಲು ತೆರೆದ. ಕೊರಳು ಮೇಲಕ್ಕೆ ಎತ್ತಿ ನೀಲಿಬಣ್ಣದ ಆಕಾಶದೆಡೆ ನೋಡಿತು, ಆ ಮೈನಾಹಕ್ಕಿ. ಸುತ್ತಲಿರುವ ಮಹಾವೃಕ್ಷಗಳನ್ನು ನೋಡಿತು. ಕೆಳಗೆ ಕಾಣಿಸುವ ಹೊಲ, ಅದರಲ್ಲಿರುವ ಹಸಿರು ಬಣ್ಣದ ಪೈರು ಪಚ್ಚೆಗಳನ್ನು ನೋಡಿತು. ಒಂದುಸಾರಿ ರೆಕ್ಕೆಗಳನ್ನು ಪಟಪಟನೆಂದು ಬಡಿಯಿತು. ವಿಶಾಲ ಪ್ರಪಂಚದಲ್ಲಿ ಆಕಾಶಮಾರ್ಗದಲ್ಲಿ ಹಾರುತ್ತಾ ಹಾಡಿದ ಹಾಡೇ ಆ ಯಜಮಾನನಿಗೆ ಕೇಳಿದ ಕೊನೆಯ ಹಾಡಾಯಿತು. ಇದನ್ನು ನೋಡಿದರೆ ಮಾನವರಿಗೇ ಅಲ್ಲ, ಪ್ರತಿ ಜೀವಿಯೂ ಸ್ವೇಚ್ಛೆಗಾಗಿ ತಾಪತ್ರಯ ಪಡುವುದು ಸ್ವಭಾವಸಿದ್ಧವಾಗಿ ಕಾಣುತ್ತದೆ. ಸ್ವಾತಂತ್ರ್ಯಕ್ಕೆ ಬೆಲೆ ಕಟ್ಟುವುದು ಕಷ್ಟಸಾಧ್ಯ; ಸ್ವಾತಂತ್ರ್ಯವಿಲ್ಲದ ಬಾಳು ಗುಲಾಮರ ಬಾಳು. ಆದ್ದರಿಂದಲೇ ಒಬ್ಬರ ಸ್ವಾತಂತ್ರ್ಯಕ್ಕೆ ಮತ್ತೊಬ್ಬರು ಅಡ್ಡಿ ಮಾಡುವುದು ತುಂಬಾ ಪಾಪಕರವಾದುದೆಂದು ಹೇಳುವರು ಹಿರಿಯರು.

ಸಂಪುಟ ೨ :: ಸೆಪ್ಟೆಂಬರ್ '೫೧ :: ಸಂಚಿಕೆ ೩

# ಮುಂದಾಲೋಚನೆ

ಒಂದಡವಿಯಲ್ಲಿ ಸಿಂಹವಿತ್ತೊಂದು
ಮುದಿತನದಲ್ಲಿ ಬೇಟೆಯಾಡಲು ಶಕ್ತಿಯಿಲ್ಲದೆ
ಕದಲಾಡಲು ಕಾಲು ಬಾರದೆ
ಹೀಗೆಂದು ಯೋಚಿಸಿತು ಮನದಿ.

ನನ್ನ ಕಂಡು ಮೃಗಗಳಾವುದು
ಹತ್ತಿರಕೆ ಬಾರದಾದವು
ನಾ ಕದಲಲಾರೆ ಮೆದಲಲಾರೆ
ಹೊಟ್ಟೆತುಂಬುವ ಬಗೆಯಾದರೂ ಹೇಗೆ?

ಕೊನೆಗೆ ಆ ಮುದಿ ಸಿಂಹವು
ಒಂದು ಗುಹೆಯೊಳಗೆ ಹೊಕ್ಕು
ತಿಳಿಗೇಡಿ ಮೃಗಗಳು ಬರುವುದೆಂದು
ತಿನ್ನಲು ಅವಿತಿಟ್ಟು ಕೊಂಡಿತಲ್ಲಿ

ನಡೆಯಿತು ಅದು ನೆನೆಸಿದಂತೆ
ಮೃಗಗಳು ಬಂದುವು ಒಂದೊಂದರಂತೆ
ನಿರ್ಭಯವಾಗಿ ಒಳಗೆ ಹೊಕ್ಕು
ಹಿಂತಿರುಗದಾದವು ಒಂದಾದರೂ.

ಪೂರ್ವವಾ ಗುಹೆಯು ಒಂದು ನರಿಯದು
ಬಹಳ ದಿನ ಯಾತ್ರೆಗೆ ಹೋಗಿ
ಹಿಂತಿರುಗಿ ಬಂತಾ ತನ್ನ ಗುಹೆಗೆ ಮತ್ತೆ
ವಾಸಮಾಡುವ ಯೋಚನೆಯಿಂದದು

ಎಸ್. ವಿ. ರಾಜು, ರಾಮನಗರ.

ಆದರೆ ನರಿಗೆ ಗೊತ್ತು
ತೊಂದರೆಯು ಕೆಲಸ ಕೂಡದೆಂದು
ಅದು ಅರಣ್ಯ ಕಾಳಕತ್ತಲೆ
ಗುಹೆ ಪ್ರವೇಶ ಪ್ರಮಾದವೆಂದು

ಅದರಿಂದ ಅದು ತುಸ ಹೊತ್ತು
ನೋಡಿತು ಸುತ್ತಮುತ್ತ
ಅಕಸ್ಮಾತಾಗಿ ನಿಂತು ಬಿಟ್ಟಿತು
ಒಂದು ಹೆಜ್ಜೆ ಮುಂದೆ ಹಾಕಿ

ಮೃಗಗಳಾವುದೋ ಒಳಗೆ ಹೋದ
ಗುರುತುಗಳು ಕಾಣಬಂದವು
ಎಲ್ಲ ಗುರುತುಗಳೂ ಒಂದೊಂದಾಗಿ
ಕೊನೆಗೆ ಗುಹೆಗೆ ದಾರಿ ತೆಗೆದವು

ಎಲ್ಲ ಒಳಗೆ ಹೋದ ಗುರುತುಗಳಿದ್ದವು
ಹೊರಗೆ ಬಂದ ಗುರುತುಗಳೊಂದೂ ಇಲ್ಲ
ನರಿಗೆ ಎಲ್ಲಾ ಅರ್ಥವಾಯಿತು [ದಾದವು
ನಡೆದಿರುವ ವಿಷಯವು

ನರಿ ಬಂದ ದಾರಿಯಲ್ಲೇ
ಕೂಡಲೇ ಮೆಲ್ಲನೆ ಹಿಂತಿರುಗಿತು
ಅಪಾಯ ತಪ್ಪಿಸಿಕೊಂಡಿತು
ತುಸ ಮುಂದಾಲೋಚನೆ ಮಾಡಿ






ಶಾಲೆಯಲ್ಲಿ ಗಂಟೆ ಹತ್ತು ಹೊಡೆಯಿತು. ಗಣಿತದ ಉಪಾಧ್ಯಾಯರು ತರಗತಿಗೆ ಬಂದರು. "ನಾನು ನಿನ್ನೆ ಕೊಟ್ಟ ಲೆಕ್ಕಗಳನ್ನು ಮಾಡಿ ತಂದಿರುವಿರಾ?" ಎಂದು ವಿದ್ಯಾರ್ಥಿಗಳನ್ನು ಕೇಳಿದರು. ಯಾರೂ ಮಾಡಿಕೊಂಡು ಬಂದಿರಲಿಲ್ಲ. ಉಪಾಧ್ಯಾಯರು ಏನು ಶಿಕ್ಷೆಕೊಡುವರೋ ಎಂದು ಹುಡುಗರೆಲ್ಲಾ ಭಯಪಡುತ್ತಿದ್ದರು. ಆದರೆ ಒಬ್ಬ ಹುಡುಗ ಮಾತ್ರ ಮಾಡಿ ತಂದಿದ್ದ. ಆ ಹುಡುಗನ ಪುಸ್ತಕದಲ್ಲಿ ರೈಟ್ ಹಾಕಿ ಅವನನ್ನು ಕುಳಿತುಕೊಳ್ಳುವಂತೆ ಹೇಳಿದರು. ಮಿಕ್ಕವರಿಗೆಲ್ಲಾ ಒಂದೊಂದು ಏಟು ಹೊಡೆದು ಬೆಂಚಿನಮೇಲೆ ನಿಲ್ಲುವಂತೆ ಆಜ್ಞಾಪಿಸಿದರು ಉಪಾಧ್ಯಾಯರು. ಆ ಹುಡುಗರೆಲ್ಲಾ ಅಳುತ್ತಿದ್ದರು. ಅವರೊಂದಿಗೆ ರೈಟ್ ಮಾರ್ಕ್ ಪಡೆದ ವಿದ್ಯಾರ್ಥಿ ಸಹ ಅಳಲು ಪ್ರಾರಂಭಿಸಿದ. ಇದನ್ನು ಕಂಡು ಉಪಾಧ್ಯಾಯರಿಗೆ ಆಶ್ಚರ್ಯವಾಯಿತು. "ನೀನೇಕೋ ಮಗು ಅಳುತ್ತಿರುವೆ? ಲೆಕ್ಕಗಳೆಲ್ಲಾ ಸರಿಯಾಗಿ ಮಾಡಿದ್ದೆಯಲ್ಲಾ?" ಎಂದು ಪ್ರಶ್ನೆ ಮಾಡಿದರು.

ಅದಕ್ಕೆ ಆ ಹುಡುಗ "ಈ ಲೆಕ್ಕ ನನಗೂ ತಿಳಿಯದು ಸಾರ್. ನಮ್ಮ ದೊಡ್ಡಣ್ಣ ಮಾಡಿಕೊಟ್ಟ. ಇಲ್ಲದಿದ್ದರೆ ನನ್ನ ಜೊತೆಯವರೊಂದಿಗೆ ನಾನೂ ಏಟು ತಿಂದು ಬೆಂಚಿನಮೇಲೆ ನಿಲ್ಲಬೇಕಿತ್ತು" ಎಂದ. ಹೆದರಿಕೆಬೆದರಿಕೆಯಿಲ್ಲದೆ ಅಷ್ಟೊಂದು ಧೈರ್ಯವಾಗಿ ಯಥಾರ್ಥವನ್ನು ನುಡಿದ ಆ ಹುಡುಗನ ಸತ್ಯಸಂಧತೆಗೆ ಉಪಾಧ್ಯಾಯರು ಚಕಿತರಾದರು ಇಷ್ಟು ಸಣ್ಣ ವಯಸ್ಸಿನಲ್ಲಿ ಇಂತಹ ಸುಗುಣಗಳನ್ನು ಪಡೆದಿರುವ ಆ ವಿದಾರ್ಥಿ ಮುಂದೆ ಒಬ್ಬ ಮಾರ್ಗದರ್ಶಕನಾಗಿ, ಕುಟುಂಬಕ್ಕೆ, ದೇಶಕ್ಕೆ ಕೀರ್ತಿತರುವನೆಂದು ನಂಬಿದರು.

ಉಪಾಧ್ಯಾಯರು ಆಶೀರ್ವದಿಸಿದಂತೆ ಆ ಹುಡುಗ ದಿನೇ ದಿನೇ ಅಭಿವೃದ್ಧಿಹೊಂದಿ, ತುಂಬಾ ಉಪಕಾರಿಯಾಗಿ, ಭಾರತ ಸರಕಾರಕ್ಕೆ ಬಲಭುಜವಾಗಿ ಪ್ರಜಾಹಿತಚಿಂತಕನಾಗಿ ಶೋಭಿಸಿದ. ಆ ಮಾರ್ಗದರ್ಶಕನೇ ದೇಶಾರಾಧಕನಾಗಿ ಪ್ರಕಾಶಿಸಿದ ಗೋಪಾಲಕೃಷ್ಣ ಗೋಖಲೆ.



# ಮಂತ್ರ ತಂತ್ರ

ಶೆಟ್ಟಿಹಳ್ಳಿಯಲ್ಲಿ ಶಂಕರಯ್ಯನಿಗೆ ಒಂದು ಸಣ್ಣ ಮನೆಯಿದೆ. ಮನೆ ನೋಡಲು ತೀರಾ ಸಣ್ಣದೇ ಆದರೂ, ಹಿತ್ತಿಲಿನ ಬಯಲು ತುಂಬಾ ದೊಡ್ಡದು. ಆ ಹಿತ್ತಿಲು ತುಂಬಾ ಎಕ್ಕೇಗಿಡ ಲಾಂಟಾನಾ, ಕಳ್ಳಿ ಮುಂತಾದ ನಾನಾತರಹ ಗಿಡಗೆಂಟೆಗಳೂ, ಹುಲ್ಲು ಪೊದರೂ ಬೆಳೆದು ಅರಣ್ಯದಂತಿತ್ತು. ಹೀಗಾದುದರಿಂದ ಆ ಅವರಣದಲ್ಲಿ ಹಗಲಲ್ಲೂ ಸಹ, ರಾತ್ರಿಯ ಹಾಗೇ ಕಾಣಿಸುತಿತ್ತು. ಅಂತಹ ಬಯಲಲ್ಲಿ ಹುಳಹುಪ್ಪಟೆಗಳು ಸರಿದಾಡುವುದೆಂದರೆ ಆಶ್ಚರ್ಯವೇನುಂಟು?

ಆತನ ಕ್ಷೇಮವನ್ನು ಬಯಸಿ ನೆರೆಹೊರೆಯವರು ಆಗಾಗ ಹೇಳುತ್ತಿದ್ದರು "ಆಯ್ಯಾ, ಶಂಕರಯ್ಯ, ಮಕ್ಕಳುಮರಿಗಳು ತಿರುಗಾಡುತ್ತಿರುತ್ತಾರೆ. ಒಂದು ಹತ್ತು ರೂಪಾಯಿ ಮುಖ ನೋಡದೆ ಪೊದೆಗಳನ್ನು ಕಡಿದು ಹಾಕಿಸು. ಗಿಡಗೆಂಟೆ ಕತ್ತರಿಸಿ ಹಾಕಿಸು. ಕೈಮೀರಿದರೆ ಏನೆಂದುಕೊಂಡರೆ ತಾನೇ ಏನು?" ಎಂದರು. ಆ ತಿಕ್ಕಲು ಶಂಕರಯ್ಯ ಹೇಳಿದವರ ಮಾತು ಕೇಳಿದರಷ್ಟೆ? ಊರಿನವರಿಗೆ ಹೇಳಿ ಹೇಳಿ ಅವರ ಬಾಯಿನೋವಾಗಿ, ನಮಗೇಕೆ ಅಂತ ಸುಮ್ಮನಿದ್ದು ಬಿಟ್ಟರು.

ಒಂದು ದಿನ ಶಂಕರಯ್ಯ ಹೆಂಡತಿ ಮಕ್ಕಳೊಂದಿಗೆ ಊಟಕ್ಕೆ ಕುಳಿತ. ಕೊಠಡಿಯ ತೂತಿನಿಂದ ಚಿಕ್ಕ ಕಪ್ಪೆಯೊಂದು ಒಳಗೆ ಬಂತು. ಅದು ಕುಪ್ಪಳಿಸುತ್ತಿರುವುದನ್ನು ವಿನೋದವಾಗಿ ನೋಡಿ ನಗುತ್ತಿದ್ದರು ಹುಡುಗರು. ಅಷ್ಟರಲ್ಲಿ ಅದೇ ಸಂದಿನಿಂದ ಒಂದು ಹಾವು ಸರಸರನೆಂದು ಹರಿದು ಬಂದು ಕಪ್ಪೆಯನ್ನು ಹಿಂಬಾಲಿಸಿ ಹಿಡಿಯ ಹೋಯಿತು. ಎಲೆ ಮುಂದೆ ಕುಳಿತಿದ್ದವರ ನಗು ಮಾಯವಾಗಿ 'ಅಪ್ಪಾ, ಅಮ್ಮಾ' ಅಂತ ತಟಕ್ಕನೆ ಎದ್ದು ಹೊರಕ್ಕೆ ಓಟಕಿತ್ತರು.

ಎಲ್ಲರೂ ಓಡಿಹೋದರೂ ಶಂಕರಯ್ಯ ಮಾತ್ರ ಒಂದು ಮೂಲೆಯಲ್ಲಿ ಅವಿತಿಟ್ಟುಕೊಂಡು ಹಾವು ಏನು ಮಾಡುವುದೋ ಎಂದು ನೋಡುತ್ತಿದ್ದ. ಅದು ಸರಸರನೆ ಹೋಗಿ ಕಪ್ಪೆಯನ್ನು ಹಿಡಿದುಬಿಟ್ಟಿತು. ಅ

ಎಂ. ಟಿ. ರಂಗರಾಜ್, ಮಲ್ಲೇಶ್ವರ.



ಕೋಣೆಯಿಂದ ತಪ್ಪಿಸಿಕೊಂಡು ಹೋಗಲು ಬೇರೊಂದು ಮಾರ್ಗವಿಲ್ಲ. ಅದರಿಂದ ಹಾವು ಬಂದ ದಾರಿಯಲ್ಲೇ ಮೆಲ್ಲನೆ ಜಾರಿಕೊಂಡಿತು. ಶಂಕರಯ್ಯ ಇದೆಲ್ಲವನ್ನೂ ನೋಡುತ್ತಲೇ ಇದ್ದ. ಅದು ಹೋಗಿ ಹೋಗಿ ಆ ಕೊಠಡಿಯ ಸಂದಿಯೊಂದರಲ್ಲಿ ಸೇರಿಕೊಂಡಿತು. ರೆಪ್ಪೆ ಹೊಡೆಯದೆ ಒಂದೇ ದೃಷ್ಟಿಯಿಂದ ಅದನ್ನೇ ಗಮನಿಸುತ್ತಿದ್ದ ಶಂಕರಯ್ಯ.

ಇಷ್ಟರಲ್ಲಿ ಮನೆಯವರ ಕಿರಿಚಾಟ ಕೇಳಿ ಹತ್ತು ಜನ ಸೇರಿದರು. "ಹಾವು ಎಲ್ಲಿಗೆ ಹೋಗುವುದೋ ಜಾಗರೂಕತೆಯಿಂದ ನೋಡಿಕೊಳ್ಳುತ್ತಿರಿಯಪ್ಪಾ" ಎಂದು ಅಲ್ಲಿ ನೆರೆದಿದ್ದವರಿಗೆ ಹೇಳಿ, ಶಂಕರಯ್ಯ ಹಾವಾಡಿಗನ ಮನೆಗೆ ಹೊರಟ. ಅದೃಷ್ಟ ಚೆನ್ನಾಗಿತ್ತು. ಶಂಕರಯ್ಯ ಹೋಗುವಹೊತ್ತಿಗೆ ಹಾವಾಡಿಗ ನಾಗಣ್ಣ ಮನೆಯಲ್ಲೇ ಇದ್ದ.

"ಬಾರೋ, ನಾಗಣ್ಣ, ಬೇಗ ಬಾ, ಮನೆ ಹಾಳಾಯಿತು. ದೊಡ್ಡ ಹಾವೊಂದು ಬಂದು ಬಿಟ್ಟಿದೆ ಮನೆಯೊಳಕ್ಕೆ" ಎಂದ ಶಂಕರಯ್ಯ. "ಯಾಕೆ ಸ್ವಾಮಿ ಅಷ್ಟೊಂದು ಹೆದರುವಿರಿ? ನಾನಿರುವಾಗ ನಿಮಗೇತರಭಯ? ಅದೆಂತಹ ಹಾವು ಸ್ವಾಮಿ? ಎಷ್ಟು ಉದ್ದ ಇದೆ? ಚುಕ್ಕೆಗಳಿವೆಯೋ, ಬರೆಗಳಿವೆಯೋ?" ಎಂದು ಸಾವಿರ ಪ್ರಶ್ನೆ ಕೇಳಿದ ನಾಗಣ್ಣ ಶಾಂತತೆಯಿಂದ.

"ಆಪತ್ತಿನಲ್ಲಿರುವಾಗ ಪ್ರಶ್ನೆಗಳೇನೋ ನಿನ್ನ...." ಎಂದು ಶಂಕರಯ್ಯ ತುಸ ಕೋಪದಿಂದ ನುಡಿದ. "ಅದಲ್ಲ ಸ್ವಾಮಿ. ನಾನು ನಾಗಸ್ವರ ಹಾಡಿ ಕೂಗ್ತೇನೆ. ಮಂತ್ರ ಹಾಕ್ತೇನೆ. ಹಾವುಗಳು ಬರ್ತವೆ. ಅವುಗಳಲ್ಲಿ ನೀವು ಹೇಳಿದಂಥ ಹಾವುಗಳು ಎಷ್ಟುಬಂದರೆ ಅಷ್ಟು ನಾಲ್ಕಾಣೆ ಕೊಡಬೇಕು. ನೀವು ಹೇಳಿದ ಹಾವು ಬರಲಿಲ್ಲ, ಒಂದು ಪಾವಲಿ ನನ್ನ ಕಷ್ಟಕ್ಕೆ ಕೊಡಿ, ಮತ್ತೇನೂ ಬೇಡ" ಎಂದ ನಾಗಣ್ಣ.

ಹಾವನ್ನು ತುಂಬಾ ಪರಿಶೀಲಿಸಿ ನೋಡಿದ್ದ ಶಂಕರಯ್ಯ, ಅದರ ಗುರುತು ಜ್ಞಾಪಕವಿಲ್ಲದೇನಿಲ್ಲ. ಆದರೂ ಈಗ ನಾಗಣ್ಣ ಹೇಳಿದ ಪ್ರಕಾರ ನಾಗಸ್ವರ ಊದಿದಕೂಡಲೇ ಬಿಲದಿಂದ ಇನ್ನೆಷ್ಟು ಹಾವುಗಳು ಬರುವುವೋ, ಹೊರಗೆ ಬಂದುದಕ್ಕೆಲ್ಲಾ ಎಲ್ಲಿ ತಲಾಪಾವಲಿ

ಕೊಡಬೇಕಾಗುವುದೋ' ಇಲ್ಲ ತನ್ನ ಮನೆಯೊಳಗೆ ಬಂದ ಹಾವು ಹೊರಗೆ ಬರುತ್ತೋ ಇಲ್ಲವೇ ಇಲ್ಲವೋ ಎಂಬ ಸಂಶಯ ಹಿಡಿಯಿತು. ಈ ಸಂಶಯದಿಂದ ತಾನು ನೋಡಿದ್ದು ನೋಡಿದಂತೆ ಅಲ್ಲದೆ ಮತ್ತೊಂದು ರೀತಿಯಾಗಿ ಹಾವನ್ನು ಬಣ್ಣಿಸಿ ಹೇಳಿದ.

ನಾಗಣ್ಣ ಕೂಡಲೇ ಹೊರಟು ಬಂದ. ನಾಗಸ್ವರ ಊದಿದ. ಹಠಾತ್ತನೆ ಐದಾರು ಸರ್ಪಗಳು ಬಂದವು. ಅವುಗಳಲ್ಲಿ ಶಂಕರಯ್ಯ ವಿವರಿಸಿದ ಹಾವು ಮಾತ್ರವಿಲ್ಲ. ನಾಗಣ್ಣ ಅವುಗಳನ್ನು ಹಿಡಿದು ಬುಟ್ಟಿಯಲ್ಲಿ ಹಾಕಿದ. ಮತ್ತೆ ಊದಿದ. ಎಷ್ಟು ಹೊತ್ತು ಊದಿದರೂ ಶಂಕರಯ್ಯ ಹೇಳಿದ ಹಾವು ಬರಲೇ ಇಲ್ಲ. ತನ್ನ ಯುಕ್ತಿ ಫಲಿಸಿದುದಕ್ಕೆ ಸಂತಸಗೊಂಡ ಶಂಕರಯ್ಯ. ನಾಗಣ್ಣನಿಗೆ ಒಂದು ಪಾವಲಿ ಕೈಯಲ್ಲಿಟ್ಟು ಹೋಗೆಂದ.

"ಮುವತ್ತು ವರ್ಷಗಳಿಂದ ನಾನು ಹಾವು ಹಿಡಿಯುತ್ತಿರುವೆನು. ಒಂದು ಸಾರಿಯಾದರೂ ವ್ಯರ್ಥವಾದುದಿಲ್ಲ. ಅಂಥಾದ್ದು ಈಗ ಹೀಗೇಕಾಯಿತು?" ಎಂದು ಅನುಮಾನವುಂಟಾಯಿತು ನಾಗಣ್ಣನಿಗೆ. ಹಣ ಕೊಡಬೇಕಾಗಿ ಬರುವುದೆಂದು ಶಂಕರಯ್ಯ ಹೂಡಿದ ಪಿತೂರಿಯೇ ಹೊರತು ಬೇರೇನಿಲ್ಲ ಎಂದು ಧೃಢಪಡಿಸಿಕೊಂಡ ನಾಗಣ್ಣ. ಶಂಕರಯ್ಯ ಕೊಟ್ಟ ನಾಲ್ಕು ಆಣೆ ತೆಗೆದುಕೊಂಡು ಹೋಗುತ್ತಾ ನಾಗಣ್ಣ "ನೀನು ನನ್ನನ್ನು



ಮೋಸಮಾಡಿರುವಂತಿದೆ. ಅದು ಸುಮ್ಮನೆ ಹೋಗುವುದಿಲ್ಲ. ಹಾವುಗಳು ಜೀವವಿಲ್ಲದ ಪ್ರಾಣಿಗಳಂತೆ ನೀನು ಎಣಿಸಿರಬಹುದು. ಅವುಗಳ ವಿಷಯದಲ್ಲಿ ಸುಳ್ಳು ಹೇಳಿ ಯಾರೂ ಸುಖಪಡಲಿಲ್ಲ. ನಮ್ಮ ಸರ್ಪಗಳು ಪವಿತ್ರವಾದವು. ಅವುಗಳೊಂದಿಗೆ ಚೆಲ್ಲಾಟ ಕೆಲಸಕ್ಕೆ ಬಾರದು. ಮೋಸಗಾರರನ್ನು ಅವು ಕ್ಷಮಿಸುವುದಿಲ್ಲ. ನೀನು ಮಾಡಿದಮೋಸಕ್ಕೆ ತಕ್ಕ ಪ್ರತಿಫಲವನ್ನು ಅನುಭವಿಸುವೆ" ಎಂದು ಹೇಳುತ್ತಾ ಸರಸರ ನಡೆದುಬಿಟ್ಟ.

"ಹುಷ್, ಅವನತಲೆ" ಎಂದುಕೊಂಡ ಮನಸ್ಸಿನಲ್ಲಿ ಶಂಕರಯ್ಯ.

ಮಾರನೇಯ ದಿನ ನಾಲ್ಕು ನಾಗರಹಾವುಗಳು ಹೆಡೆ ಎತ್ತಿಕೊಂಡು ಬುಸಗುಟ್ಟುತ್ತಾ

ಶಂಕರಯ್ಯನ ಬಯಲಿನಲ್ಲಿ ಹರಿದಾಡುತ್ತಿದ್ದವು. ಈ ಸಾರಿ ಮನೆಯವರ ಹೆದರಿಕೆ ಅಷ್ಟಿಷ್ಟಲ್ಲ! ಏನು ಮಾಡುತ್ತಾರೆ?

ಶಂಕರಯ್ಯ ಓಡೋಡುತ್ತಾ ಹೋಗಿ ನಾಗಣ್ಣನನ್ನು ಬರುವಂತೆ ಪುಸಲಾಯಿಸಿದ. "ನನಗೆ ಐದು ರೂಪಾಯಿನ ಗಿರಾಕಿ ಇದೆ, ಸ್ವಾಮಿ. ಹೋಗಬೇಕು. ಈಗ ಬರಲು ಸಾಧ್ಯವೇ ಇಲ್ಲ" ಎಂದು ಖಡಾಖಂಡಿತವಾಗಿ ತಿಳಿಸಿದ. ಕೊನೆಗೆ ದವ್ಮಯ್ಯ ಗುಡ್ಡೆ ಹಾಕಿ ಆ ಐದು ರೂಪಾಯಿಗಳನ್ನು ತಾನೇ ಕೊಟ್ಟು ಅವನನ್ನು ತನ್ನ ಸಂಗಡ ಮನೆಗೆ ಕರೆದುಕೊಂಡು ಹೋಗಿ ಆಡುತ್ತಿದ್ದ ಹಾವುಗಳನ್ನು ಹಿಡಿಸಿದ.

ಸರಿಯಾಗಿ ಇದು ನಡೆದು ಒಂದು ವಾರದ ಮೇಲೆ ಶಂಕರಯ್ಯನ ಸ್ನೇಹಿತ ರಂಗಪ್ಪ ಬಂದು ಕುಶಲಪ್ರಶ್ನೆಗಳನ್ನು ಹಾಕಿದ. ಆ ಮಾತು ಈಮಾತು ಆಡುತ್ತಾ ತಮ್ಮ ಮನೆಯಲ್ಲಿ ಈ ಮಧ್ಯ ನಡೆದ ಹಾವಿನ ಪುರಾಣ ಮಣಿ ಪೋಣಿಸಿದಂತೆ ಶಂಕರಯ್ಯನವರ ಮನೆಯವರು ಹೇಳಿದರು. ಅವರು ಹೇಳಿದುದನ್ನೆಲ್ಲಾ ಶ್ರದ್ಧೆಯಿಂದ ಕೇಳಿ ರಂಗಪ್ಪ ಗಹಗಹಸಿ ನಕ್ಕ. ಆತನೇಕೆ ನಗುತ್ತಿರುವನೋ ಅವರಿಗೇನೂ ಅರ್ಥವಾಗಲಿಲ್ಲ. "ಶಂಕರಯ್ಯ, ನೀನೆಂಥ ಹುಂಬ. ಇಷ್ಟೊಂದು ದಿನದಿಂದ ಈ ಊರಲ್ಲಿ ಇದ್ದೂ ನಿನಗೆ ನಮ್ಮ ನಾಗಣ್ಣನ ವಿಷಯ ತಿಳಿಯದೇ ಹೋಯಿತೇ? ಅವನೇನೋ ಷರತ್ತುಗಳನ್ನು ಹಾಕ್ತಾನೆ. ಆ ಪ್ರಕಾರ ಹಣ ಕೊಡದೇ ಒಂದು ತಂತ್ರ ಹೂಡ್ತಾರೆ ಕೆಲವರು. ಅದರಿಂದ ಅವರ ಮನೆಯಲ್ಲಿ ಮಂತ್ರ ಹಾಕಿ ಹಾವುಗಳನ್ನುಬಿಡ್ತಾನೆ. ನಿನಗೆ ಗೊತ್ತಿಲ್ಲವೇ ಅವೆಲ್ಲಾ ಹಲ್ಲಿಲ್ಲದ ಹಾವುಗಳು! ನಿಜವಾಗಿ ಅವುಗಳಿಂದ ಪ್ರಮಾದವೇನಿಲ್ಲ. ಆದರೆ ಭಯವಾಗುತ್ತೆಅವನ್ನು ಕಂಡರೆ. ಅಲ್ಲ, ನೀನು ಯಾವಾಗಲಾದರೂ ನಾಗಣ್ಣನಿಗೆ ಹಣದ ವಿಷಯದಲ್ಲಿ ಮೋಸಮಾಡಿರುವೆಯೇನು?" ಎಂದು ಹಾಸ್ಯ ಮಾಡಿದ.

ಶಂಕರಯ್ಯನಿಗೆ ತನ್ನ ತಪ್ಪು ಮನವರಿಕೆ ಆಯಿತು. ಆ ಮಾತು ಮರೆಸಲು ಬೇರೆ ವಿಷಯ ಪ್ರಸ್ತಾಪ ತೆಗೆದು ಮಾತನಾಡಲಾರಂಭಿಸಿದ ಶಂಕರಯ್ಯ.






## 14

[ಬಾವಿಯಲ್ಲಿ ಬಿದ್ದ ಉದಯನನು ಹೊರಗೆ ಬಂದುದೂ, ಗಡ್ಡದವನನ್ನು ಶ್ರಾವಸ್ತಿ ನಗರಕ್ಕೆ ಕಳುಹಿಸುವುದೂ, ಅವನು ಎಷ್ಟು ದಿನವಾದರೂ ಬಾರದಿರಲು ತಾನೇ ಹೊರಟು ರಾಜನಿಗೆ ಶುಭಸಮಾಚಾರ ಮುಟ್ಟಿಸುವುದೂ, ತಿರುಗಿ ಬರುವ ವೇಳೆಗೆ ರಾಕ್ಷಸನು ತನ್ನ ಸೋದರರನ್ನು ನೇಣುಹಾಕಲು ಸಿದ್ಧವಾಗುತ್ತಿರುವದೂ ಓದಿದಿರಿ]

ಆ ಭಯಂಕರ ದೃಶ್ಯವನ್ನು ಕಂಡು ಉದಯನನು ಗಡಗಡ ನಡುಗಿದನು. ಏನು ಮಾಡಲೂ ಬುದ್ಧಿಗೆ ತೋಚಲಿಲ್ಲ. ಅದೃಶ್ಯರೂಪವನ್ನು ತಾಳಿ ಇವರನ್ನು ಬಿಡಿಸೋಣವೆಂದರೆ ಅದಕ್ಕೂ ಅವಕಾಶವಿಲ್ಲವಾಯಿತು. ಏಕೆಂದರೆ ಶ್ರಾವಸ್ತಿ ನಗರದಿಂದ ಹಿಂತಿರುಗುವಾಗ ದುರದೃಷ್ಟವಶಾತ್ ಬಿಳಿಭಸ್ಮ ಎಲ್ಲಿಯೋ ಕಳೆದು ಹೋಗಿತ್ತು. ಆದರಿಂದಾಗಿ ತನ್ನ ಸಹೋದರರೂ, ಮತ್ತಿತರರೂ ಮರುಕ್ಷಣದಲ್ಲಿ ನೇಣು ಹಾಕಲ್ಪಡುವರೆಂದು ತಿಳಿದೂ ಸಹ ಉದಯನನು ಮರೆಯಿಂದ ನೋಡುತ್ತಿರುವುದನ್ನು ಹೊರತು ಮತ್ತೆ ಏನನ್ನೂ ಮಾಡಲು ಸಾಧ್ಯವಾಗಲಿಲ್ಲ. ಉದಯನನ ಮೈ ಬೆವರಿತು. ಕ್ಷಣವೊಂದು ಯುಗದಂತಾಯಿತು.

ರಾಕ್ಷಸನು ಅವರನ್ನೆಲ್ಲಾ ಮರದ ಹತ್ತಿರ ಕರೆದೊಯ್ದ. ನೇಣು ಕುಣಿಕೆಯನ್ನು ಅವರ ಕೊರಳಿಗೆ ತಗಲಿಸಿದ. ಮರೆಯಲ್ಲಿದ್ದ ಉದಯನನು ಮುಂದಕ್ಕೆ ನುಗ್ಗಲು ಪ್ರಯತ್ನಿಸುತ್ತಿರುವಲ್ಲಿ 'ನಿಲ್ಲು' ಎಂಬ ಕೂಗು ಕೇಳಿಸಿತು.

ದಿಗ್ಭ್ರಾಂತನಾಗಿ ನೋಡಿದ ಉದಯನ. ಹಾಗೆ ಕೂಗಿದ್ದು ಮತ್ತೆ ಯಾರೂ ಅಲ್ಲ; ಗಡ್ಡದವ! ಅವನು ರಾಕ್ಷಸನೊಂದಿಗೆ ಈ ರೀತಿ ಹೇಳುತ್ತಿದ್ದ. "ಇವರನ್ನು ರಕ್ಷಿಸುವ ಉದ್ದೇಶದಿಂದ ಇಷ್ಟುದಿನ ಒಂದು ರಹಸ್ಯವನ್ನು ನಿನ್ನೊಂದಿಗೆ ಹೇಳದೆ ಬಿಟ್ಟಿದ್ದೆ. ಆದರೆ



ಅದನ್ನು ಮುಚ್ಚಿಟ್ಟರೂ ಸಹ ಇವನನ್ನು ಕಾಪಾಡಲಾಗಲಿಲ್ಲ. ಅಷ್ಟೇ ಅಲ್ಲ ನನ್ನ ಪ್ರಾಣಕ್ಕೇ ಈಗ ಸಂಚಕಾರ ಬಂತು. ಆದುದರಿಂದ ಇನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ. ಇಷ್ಟು ದಿನವೂ ನಿನ್ನನ್ನೂ ಮತ್ತು ನನ್ನನ್ನೂ ಮೋಸ ಮಾಡುತ್ತಾ ಬಂದ ಈ ಮೂವರು ಹುಡುಗರೂ ಅವಳಿಮಕ್ಕಳು" ಎಂದು ಮತ್ತೇನೇನೋ ಹೇಳುತ್ತಿರುವಲ್ಲಿ ರಾಕ್ಷಸನು ನಡುವೆ ಬಾಯಿ ಹಾಕಿ, "ಏನು! ಅವಳಿಮಕ್ಕಳೇ? ಮತ್ತೆ ನೀನು ನನ್ನನ್ನು ಮೋಸಪಡಿಸಲು ಪ್ರಯತ್ನಿಸುವಂತಿದೆ. ಇವರು ಅವಳಿಮಕ್ಕಳೇ ಆಗಿದ್ದ ಪಕ್ಷಕ್ಕೆ ನನ್ನ ಕೈಗೆ ಇದುವರೆವಿಗೆ ಹೇಗೆ ಸಿಕ್ಕದೆ ಹೋದರು?" ಎಂದ.

ಅದಕ್ಕೆ ಗಡ್ಡದವನು "ನಿಜ. ನೀನಾಗಿ ಬೇಕೆಂತಲೇ ಅವರನ್ನು ಬಿಟ್ಟುಬಿಟ್ಟೆ" ಎಂದು ಅವಳಿ ಸಹೋದರರ ದೃಷ್ಟಿದೋಷ, ಅದನ್ನು ತಾನು ಪರಿಹಾರ ಮಾಡಿದ ರೀತಿ ಎಲ್ಲಾ ವಿವರವಾಗಿ ಹೇಳಿದ. ಎಲ್ಲವನ್ನೂ ಕೇಳಿ ರಾಕ್ಷಸನು "ಬಲಿಗೆ ಬೇಕಾದ ಐವತ್ತು ಜನ ಅವಳಿಮಕ್ಕಳು ಜೊತೆ ಗೂಡಿದಂತೆ ಆಯಿತು. ನೀನು ಹೇಳಿದುದೆಲ್ಲಾ ನಿಜ ಅಂತ ನಂಬಲೇ? ಇವರು ಅವಳಿಮಕ್ಕಳೋ ಇಲ್ಲವೋ ಹೇಗೆ ರುಜುವಾತಾಗುವುದು? ಅವರನ್ನೇ ಕೇಳುವೆನು" ಎಂದು ಸಂಧ್ಯಾ ನಿಶೀಥರ ಕಡೆ ತಿರುಗಿದ. "ನಮ್ಮವನು ಹೇಳಿದ್ದು ನಿಜವೇಯೋ? ಸತ್ಯವನ್ನು ಮರೆಮಾಚಿದರೆ ನಿಮ್ಮ ಪ್ರಾಣಗಳು ಉಳಿಯುವುದಿಲ್ಲ. ಆದ್ದರಿಂದ ಸುಳ್ಳಾಡಬೇಡಿ. ನಿಜವಾಗಿ ನೀವು ಅವಳಿಮಕ್ಕಳೇ ಆದ ಪಕ್ಷಕ್ಕೆ ಒಂದು ಮಹತ್ತರವಾದ ಕಾರ್ಯಕ್ಕಾಗಿ ಪ್ರಾಣಗಳನ್ನು ಅರ್ಪಿಸುತ್ತಿರುನೆವೆಂಬ ತೃಪ್ತಿಯಾದರೂ ಇರುತ್ತೆ ನಿಮಗೆ" ಎಂದನು

ಇದಕ್ಕೆ ಸಂಧ್ಯಾ ನಿಶೀಥರು "ನಿಜ" ಎಂದರು ಕಣ್ಣೀರು ಸುರಿಸುತ್ತಾ.

ಅವತಿಟ್ಟುಕೊಂಡಿದ್ದ ಉದಯನ ನಿಶ್ಚೇಷ್ಟಿತನಾದನು. ಗಡ್ಡದವನನ್ನು ನಂಬಿ ಪ್ರಾಣ ಉಳಿಸಿದುದಕ್ಕೆ ಇದೇ ಫಲವೇ? ಅವನನ್ನು ಕೂಡಲೇ ಕಡಿದು ಹಾಕೋಣವೇ ಎನ್ನಿಸಿತು. ಅಷ್ಟರಲ್ಲಿ "ಹಾಗಾದರೆ ಮೂರನೇಯವನೆಲ್ಲಿ" ಎಂದು ರಾಕ್ಷಸನು ಪ್ರಶ್ನೆ ಮಾಡಿದನು.

ಅದಕ್ಕೆ ಗಡ್ಡದವನು "ಅವನು ಮನೆಗೆ

ಹೋಗಿ ಬರುವೆನೆಂದು ಹೊರಟು ಈಗೊಂದು ವಾರವಾಯಿತು. ಈವೇಳೆಗೆ ಬಂದುಬಿಡ ಬೇಕಿತ್ತು. ದಾರಿಯಲ್ಲಿ ಏನಾದರೊಂದು ಆಪತ್ತು ಸಂಭವಿಸಿರಬಹುದು. ಇಷ್ಟರಲ್ಲೇ ಬರುವನೆಂಬ ನಂಬಿಕೆ ಸಹ ನನಗಿಲ್ಲ" ಎಂದ.

"ಸರಿ, ತಡವೇಕೆ. ನಾಳೆಯೇ ಬಲಿ ಪೂರ್ತಿ ಮಾಡಿ, ದೇವಿಯನ್ನು ಪ್ರಸನ್ನಳನ್ನಾಗಿ ಮಾಡಿ ಕೊಳುತ್ತೇನೆ. ಏರ್ಪಾಟುಗಳೆಲ್ಲಾ ಮಾಡ ಬೇಕು. ನಿನ್ನನ್ನು ನಂಬಿ ಬಿಟ್ಟುಬಿಡುವೆನೆಂದು ಮಾತ್ರ ನೀನು ತಿಳಿಯಬೇಡ" ಎಂದು ಹೇಳುತ್ತಾ ಆ ರಾಕ್ಷಸನು ಗಡ್ಡದವನನ್ನೂ ಸಂಧ್ಯಾ ನಿಶೀಥರನ್ನೂ, ರಾಜಭಟರನ್ನೂ ಹಿಂ ದೊಂದು ಮರಕ್ಕೆ ಕಟ್ಟಿ ಹಾಕಿ, ವಿಕಟ ಅಟ್ಟ ಹಾಸಮಾಡುತ್ತಾ ಹದ್ದಿನರೂಪದಲ್ಲಿ ಆಕಾಶ ಮಾರ್ಗದಲ್ಲಿ ಹಾರಿ ಹೋದನು.

ರಾಕ್ಷಸನು ಅತ್ತ ಹೋದನೋ ಇಲ್ಲವೋ, ಉದಯನನು ಕತ್ತಿ ಹಿರಿದು ಗಡ್ಡದವನ ಹತ್ತಿರಕ್ಕೆ ಓಡಿ ಅವನನ್ನು ಕೊಲ್ಲಲು ಸಿದ್ಧ ನಾದನು.

"ನಿಲ್ಲು, ತೊಂದರೆ ಪಡಬೇಡ. ನಾನು ಹೇಳುವುದನ್ನೆಲ್ಲಾ ಶಾಂತವಾಗಿ ಕೇಳಿ ಆತರುವಾಯ ನಿನ್ನಿಷ್ಟಬಂದಂತೆ ಮಾಡು" ಎಂದ ಗಡ್ಡದವ.

"ಕೇಳುವುದೇನನ್ನು! ಕೇಳಿದ್ದು ಸಾಕು. ಪ್ರಾಣದಿಂದ ಉಳಿಸಿದ್ದಕ್ಕೆ ಒಳ್ಳೆ ಸಹಾಯ ಮಾಡಿದೆ. ನಿನ್ನನ್ನೇನು ಮಾಡಿದರೂ ಪಾಪ



ಸೊಂಕುವುದಿಲ್ಲ. ಇನ್ನೂ ಸುಮ್ಮನಿರು ಅನ್ನು ವಿಯಾ?" ಎಂದು ಹೂಂಕರಿಸಿದ ಉದಯನ.

"ಅಪ್ಪಾ, ನೀನೀರೀತಿ ಕೋಪಿಸಿಕೊಳ್ಳು ವುದರಲ್ಲಿ ಆಶ್ಚರ್ಯವೇನಿಲ್ಲ. ಆದರೂ ನನ್ನ ಮಾತು ಕೇಳು. ಈ ಕ್ಷಣ ತಪ್ಪಿಸಿಕೊಂಡು ಹೊರಬಿದ್ದರೆ ಸಾಕೆಂಬ ಉದ್ದೇಶದಿಂದ ನಾನು ಅವನಿಗೆ ನಿಮ್ಮ ಜನ್ಮ ರಹಸ್ಯ ಹೇಳಬೇಕಾ ಯಿತು. ನನ್ನ ಸ್ಥಾನದಲ್ಲಿ ನೀನಿದ್ದರೂ ಅದೇ ಕೆಲಸ ಮಾಡುತ್ತಿದ್ದೆ. ನನ್ನ ಉಪಾಯ ಫಲಿ ಸಿತು. ನಾಳೆಯವರೆವಿಗೂ ಅವನು ತಡ ಮಾಡುವುದು ನಮ್ಮ ಅದೃಷ್ಟ ಅಂತಲೇ ಹೇಳ ಬೇಕು" ಎಂದ ಗಡ್ಡದವ.

ಉದಯನ ಸ್ವಲ್ಪ ಹೊತ್ತು ಯೋಚಿಸಿದ. ಕೊಂಚ ಸುಧಾರಿಸಿಕೊಂಡು "ಸರಿ, ನಿನ್ನನ್ನೂ ನಂಬಿದೆವೆಂತಲೇ ಇಟ್ಟುಕೋ. ಬೆಳಗಾಗು



ವಷ್ಟರಲ್ಲಿ ಅವನ ಕೈಗೆ ಸಿಕ್ಕದೆ ನಾವೆಲ್ಲರೂ ತಪ್ಪಿಸಿಕೊಳ್ಳುವುದು ಹೇಗೆ?" ಎಂದ.

ಆಗ ಗಡ್ಡದವನು "ಅದನ್ನೂ ಯೋಚಿಸಿದ್ದೇನೆ. ಮೊದಲು ಇವರ ಕಟ್ಟುಗಳನ್ನು ಬಿಡಿಸೋಣ" ಎಂದು ಸಂಧ್ಯಾ ನಿಶೀಥರನ್ನೂ, ರಾಜಭಟರನ್ನೂ ಬಿಡಿಸಿದ. ತರುವಾಯ ಅವರನ್ನು ಸಂಗಡ ಕರೆದುಕೊಂಡು ಕೊಳದ ಹತ್ತಿರಕ್ಕೆ ಹೋದ. ಇವರನ್ನು ಕಂಡ ಕೂಡಲೇ ರಾಜಕುಮಾರಿಯರು ಹೊರಗೆ ಬಂದರು.

ಗಡ್ಡದವನು ಉದಯನನನ್ನು ಕುರಿತು "ಆ ಕೆಂಪು ಅಂಜನವನ್ನಿಲ್ಲಿ ಕೊಡು" ಎಂದ.

ರಾಜಕುಮಾರಿಯರನ್ನು ಹತ್ತಿರ ಬರುವಂತೆ ಕರೆದ. ಅವರು ಬಂದ ಕೂಡಲೇ ಆ ಕೆಂಪು ಅಂಜನವನ್ನು ತೆಗೆದುಕೊಂಡು ಸುಹಾಸಿನಿಯ ಭುಜಕ್ಕೆ ಬಳಿದ. ಕೂಡಲೇ ಆಕೆಯ ಕೈ ಮಾಯವಾಯಿತು. ತರುವಾಯ ಸುಭಾಷಿಣಿಯನ್ನು ಕೂರಿಸಿ, ಮೊಣಕಾಲಿನ ಹತ್ತಿರ ಲೇಪಿಸಲು ಆಕೆಯ ಕಾಲು ಮಾಯವಾಯಿತು. ಸ್ವಲ್ಪ ಅಂಜನ ತೆಗೆದು ಸುಕೇಶಿನಿಯ ಕಣ್ಣಿಗೆ ಹಚ್ಚಿದ. ಆಕೆಯ ಕಣ್ಣುಗಳು ಕುರುಡಾದವು. ಈ ರೀತಿ ಮೂವರು ರಾಜಕುಮಾರಿಯರು ಅಂಗಹೀನರಾದುದನ್ನು ಕಂಡು, ಉದಯನನು "ಏನಿದು ದುರವಸ್ಥೆ! ಏನೋ ಉಪಾಯ ಹೇಳುವೆನೆಂದು ನೀನು ಮಾಡಿರುವ ಕೆಲಸವಾದರೂ ಏನು?" ಎಂದು ಕುಪಿತನಾದ.

"ಇನ್ನೂ ನಿನ್ನ ದುಡುಕು ಸ್ವಭಾವ ಬಿಡಲಿಲ್ಲವಲ್ಲಾ. ಪ್ರತಿಯೊಂದು ವಿಷಯದಲ್ಲೂ ನೀನು ಅನುಮಾನ ಪಟ್ಟರೆ ಹೇಗೆ?" ಎಂದು ಗಡ್ಡದವನು ಉದಯನನ ಕಿವಿಯಲ್ಲೇನೋ ಹೇಳಿದ.

ಉದಯನನು ಸ್ವಲ್ಪ ತೃಪ್ತಿಗೊಂಡು "ಮತ್ತೆ ಇಷ್ಟುದಿನವೂ ಯಾವವಿಧವಾದ ಅವಯವ ಲೋಪವಿಲ್ಲದೆ ಇದ್ದು ಅವನು ಬರುವ ವೇಳೆಗೆ ಹಠಾತ್ತನೆ ಈ ರೀತಿ ನಡೆದಿರುವುದನ್ನು ನೋಡಿದರೆ ಅವನಿಗೆ ನಿನ್ನ ಮೇಲೆ ಅನುಮಾನ ಬರುವುದಿಲ್ಲವೇ? ಇದರಿಂದ ನಮಗೆ ಆಗುವ ಲಾಭವಾದರೂ ಏನು?" ಎಂದು ಕೇಳಿದ.



"ಅದೆಲ್ಲಾ ಆಮೇಲೆ ನೋಡಿಕೊಳ್ಳೋಣ. ಸದ್ಯಕ್ಕೆ ಇದಕ್ಕಿಂತಲೂ ಬೇರೆ ಮಾರ್ಗವಿಲ್ಲ. ನಾಳೆ ಅವನು ಬರುವ ವೇಳೆಗೆ ನಾವು ಎಂದಿನಂತೆ ಮರಗಳಿಗೆ ಬಂಧಿಸಲ್ಪಟ್ಟಿರುವೆವು. ನೀನು ಮಾತ್ರ ಭಸ್ಮವನ್ನು ಎರಚಿಕೊಂಡು ಅದೃಶ್ಯ ರೂಪದಲ್ಲಿ ಇದ್ದು ಏನು ನಡೆಯುವುದೋ ನೋಡುತ್ತಿರು" ಎಂದ ಗಡ್ಡದವ.

ಉದಯನನು ಮುಖ ಕೆಳಗೆ ಮಾಡಿ "ಆ ಭಸ್ಮವೇ ಇದ್ದಿದ್ದ ಪಕ್ಷಕ್ಕೆ ಇಷ್ಟೊಂದು ಕಷ್ಟವೇಕೆ ಬರುತಿತ್ತು. ಶ್ರಾವಸ್ತಿಯಿಂದ ಬರುವಾಗ ಅದನ್ನೆಲ್ಲೋ ಕಳೆದುಕೊಂಡೆ" ಎಂದ.

"ಏನು ಕಳೆದು ಕೊಂಡೆಯಾ? ಪರವಾಯಿಲ್ಲ. ನೀನು ನಮಗೆ ಕೊಟ್ಟು ಹೋದ ಭಸ್ಮವನ್ನು ನಾವು ಉಪಯೋಗಿಸಿಲ್ಲ. ಇದೋ ತೆಗೆದುಕೊ" ಎಂದು ಒಂದು ಪೊಟ್ಟಣವನ್ನು ಕೊಟ್ಟ.

ಆ ತರುವಾಯ ಉದಯನನು ಮತ್ತೆ ಅವರನ್ನು ಎಂದಿನಂತೆ ಮರಗಳಿಗೆ ಬಿಗಿದು ತಾನು ಅದೃಶ್ಯ ರೂಪದಲ್ಲಿ ಇದ್ದು ಬಿಟ್ಟ.

* * *

ಮಾರುದಿನ ಬೆಳಗಿನ ಜಾವವೇ ಬಿರುಗಾಳಿ ಪ್ರಾರಂಭವಾಯಿತು. ರಾಕ್ಷಸನು ಬರುತ್ತಿರುವನೆಂದು ಎಲ್ಲರೂ ತಿಳಿದುಕೊಂಡರು. ಸಂಧ್ಯಾ ನಿಶೀಥರೂ, ಗಡ್ಡದವನೂ, ರಾಜಭಟರೂ ತುಂಬಾ ಸುಸ್ತಾದವರಂತೆ ಮರಗಳಡಿಯಲ್ಲಿದ್ದರು. ಮತ್ತೆ ತುಸ ಹೊತ್ತಿಗೆಲ್ಲಾ ರಾಕ್ಷಸನು ಬಂದೇ ಬಂದ. ಅವನ ಸಂಗಡ ಗಂಡುಗೊಡಲಿಗಳನ್ನು ಭುಜಗಳಮೇಲೆ ಹಾಕಿಕೊಂಡು ಇಬ್ಬರು ಭಟರು ಬರುತ್ತಿದ್ದರು. ಅವರ ಹಿಂದೆ ಒಂದು ದೊಡ್ಡ ಪರಿವಾರವೂ ಮಾಲೆಗಳೊಂದಿಗೆ ನಡೆದು ಬಂದರು.

ಸಂಧ್ಯಾ ನಿಶೀಥರಿದ್ದ ಸ್ಥಳವನ್ನು ಸೇರಿದ ಕೂಡಲೇ ರಾಕ್ಷಸನು ತನಗೆ ಏರ್ಪಡಿಸಿದ್ದ ಸಿಂಹಾಸನದಮೇಲೆ ಕುಳಿತು ಕೊಂಡು "ಕೊಳದಲ್ಲಿರುವ ಅವಳಿಮಕ್ಕಳಿಗೆಲ್ಲಾ ಸ್ನಾನ ಮಾಡಿಸಿ, ದಿವ್ಯವಾಗಿ ಅಲಂಕರಿಸಿ ಒಬ್ಬೊಬ್ಬರನ್ನೇ ನನ್ನ ಮುಂದೆ ತಂದು ನಿಲ್ಲಿಸಿ" ಎಂದು ತನ್ನ ಪರಿವಾರಕ್ಕೆ ಆಜ್ಞೆ ಮಾಡಿದ.

ಕೂಡಲೇ ಅವನ ಆಜ್ಞೆಯಂತೆ ಕೆಲಸ ಮಾಡ ತೊಡಗಿದರು. ಒಬ್ಬರು ಸ್ನಾನ

ಮಾಡಿಸುತ್ತಿದ್ದರು; ಮತ್ತೊಬ್ಬರು ಅವರಿಗೆ ವಸ್ತ್ರಗಳನ್ನು ಅಲಂಕರಿಸುತ್ತಿದ್ದರು. ಎಲ್ಲ ಸಿದ್ಧವಾದ ಕೂಡಲೇ ಅವರನ್ನು ತಂದು ರಾಕ್ಷಸನ ಮುಂದೆ ನಿಲ್ಲಿಸುತಿದ್ದ ರಾಜ ಕುಮಾರಿಯರನ್ನೂ, ರಾಜಕುಮಾರರನ್ನೂ ನೋಡಿ "ನೀನು ಕನಕಪುರಿಯ ರಾಜ ಕುಮಾರಿಯಲ್ಲವೇ? ನೀನು ಅನಂತೇಶ್ವರನ ಮುದ್ದಿನ ಮಗಳಲ್ಲವೇ? ನೀನು ಮಣಿಪುರ ದರಸನ ಅಕ್ಕರೆಯ ಪುತ್ರನಹುದಷ್ಟೇ?" ಎಂದು ಒಬ್ಬೊಬ್ಬರನ್ನೂ ಕುರಿತು ಮಾತ ನಾಡಿಸುತ್ತಿದ್ದ. ಪಾಪ, ಅವರು ತಲೆ ತಗ್ಗಿಸಿ ಕೊಂಡು ಕಣ್ಣೀರು ಸುರಿಸುತ್ತಿದ್ದರು.

ಇಷ್ಟರಲ್ಲಿ ಒಬ್ಬ ಪರಿಚಾರಿಕೆ ರಾಜ ಕುಮಾರಿಯೊಬ್ಬಳನ್ನು ತಂದು ನಿಲ್ಲಿಸಿ "ಪ್ರಭೂ, ಇದೇನಿದು. ಈ ಕುರುಡಳನ್ನು ತಂದಿರಿ. ದೇವಿ ಸ್ವೀಕರಿಸುವಳೇ?" ಎಂದಳು. ರಾಕ್ಷಸನು ವಿಸ್ಮಯಗೊಂಡು "ಏನಿದು? ಅಂಧಳೇ?" ಎಂದು ಸಿಂಹಾಸನ ದಿಂದ ಇಳಿದು ರಾಜಕುಮಾರಿಯನ್ನು ಪರಿ ಶೀಲಿಸಲು ಹೋಗುವಷ್ಟರಲ್ಲಿ ಮತ್ತೊಬ್ಬ ಪರಿಚಾರಿಕೆ "ಈ ಕುಂಟಳನ್ನೇಕೆ ತಂದಿರಿ, ಪ್ರಭೂ" ಎಂದು ತಾನು ಕರೆತಂದ ರಾಜ ಕುಮಾರಿಯನ್ನು ಮುಂದೆ ನಿಲ್ಲಿಸಿದಳು.

ರಾಕ್ಷಸ ಕೋಪ ತಡೆಯಲಾರದೆ ಹೋದ.



ಕಣ್ಣುಗಳಲ್ಲಿ ಬೆಂಕಿಕಾರುತ್ತಾ "ಮೋಸ, ದ್ರೋಹ" ಎಂದು ಭೂಮ್ಯಾಕಾಶಗಳು ನಡುಗುವಂತೆ ಬೊಬ್ಬಿಟ್ಟ.

ಇಷ್ಟರಲ್ಲಿ ಮತ್ತೊಬ್ಬ ಪರಿಚಾರಿಕೆ "ಈ ರಾಜಕುಮಾರಿಗೆ ಕೈಗಳೇ ಇಲ್ಲ ಮಹಾರಾಜ" ಎಂದು ತನ್ನ ಸಂಗಡ ತಂದ ರಾಜಕುಮಾರಿಯನ್ನು ರಾಕ್ಷಸನಿಗೆ ತೋರಿಸಿದಳು.

ರಾಕ್ಷಸನ ಸಿಟ್ಟು ನೆತ್ತಿಗೇರಿತು. ಒಂದು ನೆಗತಕ್ಕೆ ಗಡ್ಡದವನ ಹತ್ತಿರಕ್ಕೆ ಹಾರಿ ಮರವನ್ನು ಬೇರುಗಳೊಂದಿಗೆ ಕಿತ್ತು, ಗಡ್ಡದವನನ್ನು ದುರುಗುಟ್ಟಿಕೊಂಡು ನೋಡಿ "ಎಲವೋ, ಏನಿದು ದ್ರೋಹ. ಸುಲಕ್ಷಣವಾದ ಅವಳಿಮಕ್ಕಳನ್ನು ತಂದು ಕೊಳದಲ್ಲಿ ಹಾಕಿದೆ. ಈಗ ಈ ಕುರೂಪಿಗಳೆಲ್ಲಿಂದ ಬಂದರು. ಇದು ನಿನ್ನ ಕೆಲಸವೇ ಇರಬೇಕು. ನಿಜ ನುಡಿಯುವೆಯಾ ಇಲ್ಲವೇ ಮೊದಲು ನಿನ್ನ ಬಲಿ ಕೊಡುವಂತೆ ಹೇಳಲೇ?" ಎಂದ.

ಗಡ್ಡದವನು ಬೆದರಲಿಲ್ಲ; ಹೆದರಲಿಲ್ಲ, "ಕೂಗಾಟದಿಂದ ಪ್ರಯೋಜನವಿಲ್ಲ. ನಾನೇ ಕಾರ್ಯ ಮಾಡಿರಬಹುದೆಂದಲ್ಲವೇ ನಿನ್ನ ಸಂದೇಹ. ಒಂದು ಕ್ಷಣತಡಿ. ನಾನು ಹೇಳುವುದನ್ನೆಲ್ಲಾ ಕೇಳು. ಆಮೇಲೆ ನಿನ್ನಿಷ್ಟ ಬಂದಂತೆ ಮಾಡು" ಎಂದು ಹೇಳಿದ.

"ಸಾಕು ಬಾಯಿ ಮುಚ್ಚು. ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡು ಬಂದರೆ ಎಲ್ಲಾ ಮಣ್ಣುಪಾಲು ಮಾಡಿದ್ದಾನೆ. ಅದೇನೋ



ಬೇಗ ಬೊಗಳು" ಎಂದ ರಾಕ್ಷಸ ಏಕಾಏಕಿ ಆ ಮರವನ್ನು ಕೆಳಗೆ ಅಪ್ಪಳಿಸಿ.

"ಅವರಿಗೆ ಅಂಗವೈಕಲ್ಯ ಹೇಗುಂಟಾಯಿತೋ ನಾನರಿಯೆ. ಆದರೆ ಈ ರೀತಿ ನಡೆದಿರಬಹುದೆಂದು ನನ್ನ ಊಹೆ. ಈ ರೀತಿ ಮಾಡುವ ಬುದ್ಧಿ ಕುಶಲತೆ, ತಪ್ಪಿಸಿಕೊಂಡು ಹೋಗಿರುವ ಉದಯನನಿಗಿದೆ. ಆ ಅವಳಿ ಸಹೋದರರಿಗೆ ದೃಷ್ಟಿ ದೋಷ ಪರಿಹಾರ ಮಾಡುವಾಗ ಈ ರಹಸ್ಯ ನಾನು ಹೇಳಿಬಿಟ್ಟೆ. ಬೇಕಾದ ಅಂಜನಗಳು ಅವನ ಹತ್ತಿರವಿದೆ. ಅವನು ಜೀವಿಸಿದ್ದರೆ ಎಂದೋ ಒಂದು ದಿನ ನಿನ್ನ ಕೈಗೆ ಸಿಕ್ಕಿಬೀಳುವನು. ಆಗ ಅವನಿಂದಲೇ ಇವರಿಗೆ ಈ ಅಂಗ ವೈಕಲ್ಯವನ್ನು ಹೋಗಲಾಡಿಸಬಹುದು. ಅಲ್ಲಿಯ ತನಕ ಈ ಈ ಹುಡುಗರನ್ನು ಬಂಧಿಸಿಡು. ಇದೇ ನಿನಗೆ ನನ್ನ ಸಲಹೆ. ಇದರ ಮೇಲೆ ನಿನ್ನಿಷ್ಟ" ಎಂದ.

"ಸರಿ, ಈಸಾರಿ ಅವನು ಸಿಕ್ಕಿದನೋ ಸತ್ತಾಂತಲೇ ಭಾವಿಸು. ಮೊದಲು ನಿಮ್ಮ ವಿಷಯ ನೋಡಬೇಕು, ನಡೆಯಿರಿ" ಎಂದು ರಾಕ್ಷಸನು ಸಂಧ್ಯಾ ನಿಶೀಥರನ್ನೂ, ರಾಜಭಟರನ್ನೂ ಗಡ್ಡದವನನ್ನೂ ಹಿಂದೇ ಹಗ್ಗದಲ್ಲಿ ಬಿಗಿದು ಕಟ್ಟಿ, ತನ್ನ ಸಂಗಡ ಎಳೆದುಕೊಂಡು ಹೋದನು.

ಇದೆಲ್ಲವನ್ನೂ ನೋಡುತ್ತಾ ಉದಯನನು ಹಿಂಬಾಲಿಸಿದನು. ಸ್ವಲ್ಪದೂರ ಹೋಗಿ ರಾಕ್ಷಸನು ಒಂದು ಎಲೆಗಳ ರಾಶಿಯ ಹತ್ತಿರ ನಿಂತ. ಹದ್ದಿನರೂಪ ಪಡೆದು ವಿಶಾಲವಾದ ತನ್ನ ಎರಡು ರೆಕ್ಕೆಗಳನ್ನು ಬಡಿಯಲು, ಆ ಎಲೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಚದುರಿ ಹೋಗಿ, ಆ ಸ್ಥಳದಲ್ಲಿ ಭೂಮಿಯೊಳಕ್ಕೆ ಹೋಗಲು ಒಂದು ದ್ವಾರ ಕಾಣಿಸಿತು. ರಾಕ್ಷಸನು ಸಂಧ್ಯಾ ನಿಶೀಥರನ್ನೂ, ಗಡ್ಡದವನನ್ನೂ ರಾಜಭಟರನ್ನೂ ಆ ದ್ವಾರದೊಳಕ್ಕೆ ನೂಕಿ ಮತ್ತೆ ಎಲೆಗಳನ್ನು ಒಟ್ಟುಗೂಡಿಸಿ ದ್ವಾರವನ್ನು ಮುಚ್ಚಿ, ಕೊಳದ ಹತ್ತಿರ ಹೋದನು.

ಅಲಂಕೃತರಾದ ಅವಳಿಮಕ್ಕಳನ್ನು ಜಾಗರೂಕತೆಯಿಂದ ನೋಡಿಕೊಳ್ಳುತ್ತಿರುವಂತೆ ಪರಿಚಾರಿಕೆಯರಿಗೂ ಭಟರಿಗೂ ಆಜ್ಞಾಪಿಸಿ ಅಂಗಹೀನರಾಗಿದ್ದ ಸುಹಾಸಿನಿ, ಸುಭಾಷಿಣಿ ಮತ್ತು ಸುಕೇಶಿನಿಯರನ್ನು ಎತ್ತಿಕೊಂಡು ಹದ್ದಿನರೂಪದಲ್ಲಿ ಹಾರಿ ಹೋದನು.

(ಇನ್ನೂ ಇದೆ)





# ನರಿಯ ಸೊಕ್ಕು

ರಾಮಪುರದ ಒಂದು ಮನೆಯ ಜಗಲಿಯ ಮೇಲೆ ರಂಗಣ್ಣ ಎಂಬ ಮೂರನೇ ತರಗತಿಯ ವಿದ್ಯಾರ್ಥಿಯೊಬ್ಬನು ಕನ್ನಡ ಪಠ್ಯಪುಸ್ತಕವನ್ನು ಓದುತ್ತಿದ್ದನು. ಅವನು ಓದುತ್ತಿದ್ದುದು ನರಿಯ ಪಾಠ. 'ನರಿ ತುಂಬಾ ಠಕ್ಕು ಪ್ರಾಣಿ' ಎಂದು ಅವನು ಗಟ್ಟಿಯಾಗಿ ಓದುತ್ತಿದ್ದರೆ, ಅನತಿದೂರದಲ್ಲಿದ್ದ ಹೊಲದೆಡೆ ಅಡ್ಡಾಡುತ್ತಿದ್ದ ಒಂದು ನರಿಗೆ ಈ ವಾಕ್ಯ ಕೇಳಿಸಿತು. ತನ್ನ ಬುದ್ಧಿಸಾಮರ್ಥ್ಯಗಳನ್ನು ಪುಸ್ತಕಗಳಲ್ಲೂ ಹೊಗಳಿರುವುದನ್ನು ತಿಳಿದು ನರಿ ಗರ್ವದಿಂದ ನೆಗೆದಾಡಿತು.

ಆ ಪಕ್ಕದಲ್ಲೇ ಅತ್ತಿಂದ ಇತ್ತ, ಇತ್ತಿಂದ ಅತ್ತ ವಕ್ರವಕ್ರವಾಗಿ ನಡೆದಾಡುತ್ತಿದ್ದ ಒಂದು ಏಡಿ ನರಿಯನ್ನು ಕಂಡು "ಏನು ಭಾವ, ವಿಶೇಷ? ತುಂಬಾ ಹುಮ್ಮಸ್ಸಿನಲ್ಲಿರುವ ಹಾಗಿದೆ?" ಎಂದಿತು.

"ಇದಕ್ಕಿಂತಲೂ ಮತ್ತೇನು ಬೇಕು ಏಡಿ? ಆ ಜಗಲಿಮೇಲೆ ಕುಳಿತಿರುವ ಹುಡುಗ ಓದುತ್ತಿರುವ ಪಾಠ ಕೇಳಿಸುತ್ತಿಲ್ಲವೇ? ನಾನು 'ಬುದ್ಧಿವಂತನಾದ ಜಂತು' ಎಂದು ಮನುಷ್ಯರೂ ಸಹ ತಮ್ಮ ಪುಸ್ತಕಗಳಲ್ಲಿ ಬರೆದು ಮೆಚ್ಚಿಕೊಳ್ಳುತ್ತಿರುವರು" ಎಂದು ನರಿ ಒಂದು ಸಾರಿ ಹೆಮ್ಮೆಯಿಂದ ಬಾಲ ಆಡಿಸಿತು.

ನಾನು ಮರ್ಯಾದೆಯಾಗಿ ಭಾವಾ ಅಂತ ಕರೆದರೆ ನನ್ನನ್ನು ಈ ನರಿ ತಾತ್ಸಾರದಿಂದ "ಏಡಿ" ಎಂದು ಕರೆಯುತ್ತಿದೆ. ಮನುಷ್ಯರು ಮೆಚ್ಚಿಕೊಳ್ಳುತ್ತಿರುವರೆಂದು ಇದಕ್ಕೆ ಇಷ್ಟೊಂದು ಸೊಕ್ಕು. ಇದರ ಗರ್ವ ಅಣಗಿಸಬೇಕು" ಎಂದುಕೊಂಡಿತು ಏಡಿ. ಹೀಗೆಂದುಕೊಂಡು ಏಡಿ "ಅದು ಸರಿ ಭಾವ, 'ಠಕ್ಕು' ಅಂತ ಅಂದರೆ 'ಮೋಸ' ಅಂತ ಅಲ್ಲವೇ? ಇದು ಮೆಚ್ಚಿಕೆ ಹೇಗೆ ತಾನೇ ಆಗುವುದು" ಎಂದಿತು. ಇದನ್ನು ಕೇಳಿ ನರಿಗೆ ಕೋಪ ಬಂತು. "ಲೇ, ಏಡಿ ನಿನಗೆಷ್ಟು ಅಸೂಯೆ. ಇಲ್ಲದ ಸಲ್ಲದ ಅರ್ಥ ತಂದು ಹೊಗಳಿಕೆಯನ್ನು ತೆಗಳಿಕೆಯಾಗಿ ಬದಲಾಯಿಸಿ ಹೇಳುವೆಯಲ್ಲಾ" ಎಂದಿತು.

ಏಡಿ ಕಿರುನಗೆಯಿಂದ "ಭಾವ, ನೀನು ಬುದ್ಧಿವಂತನೇ ಇರಬಹುದು. ಆದರೆ ನಿನ

ಟಿ. ಸುಬ್ಬರಾವ್, ಹೊಸದೆಹಲಿ.



ಗಿಂತಲೂ ತಿಳುವಳಿಕೆಯುಳ್ಳವರೂ ಇರುತ್ತಾರೆ" ಎಂದಿತು. ನರಿ ಕೋಪಗೊಂಡು "ಏನು! ನನಗಿಂತಲೂ ಕುಶಾಗ್ರಮತಿಗಳು ಇರುವರೇ?" ಎಂದು ಕೇಳಿತು.

"ಇಲ್ಲದೇನು. ನಾವೇ ಇದ್ದೇವೆ" ಎಂದು ಏಡಿ ಉತ್ತರ ಕೊಟ್ಟಿತು.

"ಓಹೊಸ್ಹೋ, ನೆಟ್ಟಗೆ ನಡೆಯಲು ಬಾರದೆ ವಕ್ರವಕ್ರವಾಗಿ ಸರಿದಾಡುವ ಏಡಿಗಳು, ನರಿಗಳಿಗಿಂತ ಬುದ್ಧಿಶಾಲಿಗಳೇ?" ಎಂದಿತು ನರಿ.

ಉಕ್ಕಿ ಬರುತ್ತಿದ್ದ ನಗುವನ್ನು ತಡೆದುಕೊಂಡು "ಭಾವ, ನಾವು ನೆಟ್ಟಗೆ ನಡೆಯುವಂತಾಗಿದ್ದರೆ ನಮ್ಮ ಮುಂದೆ ಯಾವ ಪ್ರಾಣಿ ನಿಲ್ಲುತಿತ್ತು?" ಎಂದು ಚಮತ್ಕಾರವಾಗಿ ಸಮರ್ಥಿಸಿಕೊಂಡಿತು ಏಡಿ.

"ಈ ಮಾತುಗಳಿಗೇನು ಬಿಡಯ್ಯಾ" ಎಂದು ಹಾಸ್ಯ ಮಾಡಿತು ನರಿ.

"ಬರೀ ಮಾತಲ್ಲ, ಬೇಕಾದರೆ ಪಂದ್ಯ ಏಡು. ನಮ್ಮಲ್ಲಿ ಯಾರು ವೇಗವಾಗಿ ಹೋಗಬಲ್ಲರೋ ತಿಳಿಯುತ್ತದೆ" ಎಂದಿತು ಏಡಿ.

ಏಡಿ ಇಷ್ಟೊಂದು ಧೈರ್ಯವಾಗಿ ಹೇಳಲು ನರಿಗೆ ತುಂಬಾ ಆಚ್ಚರಿಯಾಗಿ "ಸರಿ ಹಾಗಾದರೆ ನಾವಿಬ್ಬರೂ ಆ ಹೊಲದಲ್ಲಿ ಈ ಕಟ್ಟೆಯಿಂದ ಆಚೆಕಡೆ ಕಟ್ಟೆಯವರೆವಿಗೆ ಓಡೋಣ. ನಿನ್ನ ಜಂಭ ತಿಳಿದುಬಿಡುತ್ತೆ" ಎಂದಿತು. ಸರಿಯೆಂದು ಒಪ್ಪಿಕೊಂಡಿತು ಏಡಿ.

ಏಡಿ ಮತ್ತು ನರಿ ಮೊದಲನೇ ಕಟ್ಟೆಯ ಹತ್ತಿರ ಹೋದವು. "ಸರಿಯಾಗಿ ಒಬ್ಬರ ಪಕ್ಕದಲ್ಲಿ ಒಬ್ಬರು ನಿಲ್ಲಬೇಕು" ಎಂದಿತು ನರಿ.

"ಹಾಗಲ್ಲ, ನಿನಗಿಂತಲೂ ನಾನು ಹೆಚ್ಚು ವೇಗವಾಗಿ ಓಡಬಲ್ಲೆ. ಆದುದರಿಂದ ನಾನು ತುಸ ಹಿಂದೆ ನಿಂತರೂ ಪರವಾಯಿಲ್ಲ" ಎಂದು ಏಡಿ ನರಿಯ ಹಿಂದೆ ನಿಂತಿತು.

"ನಮ್ಮಿಬ್ಬರಲ್ಲಿ ಯಾರು ಪಂದ್ಯ ಗೆದ್ದರೋ ತಿಳಿಸಲು ಮಧ್ಯವರ್ತಿ ಯಾರಾದರೂ ಇರಬೇಡವೇ?" ಎಂದಿತು ನರಿ.

ಆ ಸಮಯಕ್ಕೆ ಸರಿಯಾಗಿ ಕಾಗೆಯೊಂದು ಅತ್ತಕಡೆ ಹೋಗುತಿತ್ತು. ಅದನ್ನು ಏಡಿ ನೋಡಿ "ಕಾಗಕ್ಕ, ಕಾಗಕ್ಕ, ಒಂದು ಕ್ಷಣ ಅತ್ತಕಡೆಯಿರುವ ಕಟ್ಟೆಯ ಮೇಲೆ ನಿಂತು ನಮಗಾಗಿ ಎದುರು ನೋಡುತ್ತಿರು. ನಮ್ಮಲ್ಲಿ ಯಾರು ಮೊದಲು ಅಲ್ಲಿಗೆ ಬಂದು ಸೇರು

ವರೋ ಹೇಳಿ ಹೋಗುವೆಯಂತೆ" ಎಂದು ಕೇಳಿಕೊಂಡಿತು. ಕಾಗೆ "ಸರಿ" ಎಂದು ಹಾರಿ ಎದುರು ಕಟ್ಟೆಯ ಮೇಲೆ ಹೋಗಿ ನಿಂತುಕೊಂಡಿತು.

ನರಿ 'ಒನ್, ಟೂ, ತ್ರೀ' ಎಂದು ಓಡಿತು. ಏಡಿ ಕೂಡಲೇ ಓಡಲಿಲ್ಲ. ಅದೇನು ಮಾಡಿತು ಗೊತ್ತೇ? ನರಿ 'ತ್ರೀ' ಎಂದ ಕೂಡಲೇ ಚಂಗನೆ ಎಗರಿ ತಿಳಿಯದಂತೆ ನರಿಯ ಕುಚ್ಚು ಬಾಲವನ್ನು ಕಚ್ಚಿ ಹಿಡಿದುಕೊಂಡಿತು.

ನರಿ ಆಚೆಯ ಕಟ್ಟೆಯ ಮೇಲಿದ್ದ ಕಾಗೆಯ ಹತ್ತಿರ ಸೇರಿಕೊಂಡು "ಏಡಿ, ಮಾತು ಬಹಳ ವಾಡಿದೆ. ಎಷ್ಟು ದೂರ ನಡೆದಿರುವೆ, ಅಂಗುಲವೋ, ಎರಡಂಗುಲವೋ?" ಎಂದು ಅವಹೇಳನ ಮಾಡುತ್ತಾ, ಏಡಿ ಎಷ್ಟು ದೂರದಲ್ಲಿರುವುದೋ ನೋಡಲು ಹಿಂದಕ್ಕೆ ತಿರುಗಿತು. ನರಿಯು ಹಿಂದಕ್ಕೆ ತಿರುಗಿದ ರೀತಿಯಲ್ಲಿ ಅದರ ಬಾಲ ಕಾಗೆಯ ಮುಂದಕ್ಕೆ ಬಂತು. ಕೂಡಲೇ ಏಡಿ ಹಿಡಿತ ಬಿಟ್ಟು ಕೆಳಗಿಳಿದು "ನರಿಭಾವಾ, ಹಿಂದೆ ಏಕೆ ನೋಡುತ್ತಿರುವೆ? ನಿನಗಿಂತಲೂ ಮೊದಲು ಇಲ್ಲಿ ಸೇರಿಕೊಂಡು ನಿನಗಾಗಿ ಕಾದಿದ್ದೇನೆ" ಎಂದಿತು.

ನರಿ ಆಶ್ಚರ್ಯದಿಂದ ಕಾಗೆಯಕಡೆ ತಿರುಗಲು ಏಡಿ ಪ್ರತ್ಯಕ್ಷವಾಗಿತ್ತು. ಮತ್ತೇನೂ ಹೇಳಲಾರದೆ ನರಿ ಮುಖತಗ್ಗಿಸಿ "ಏಡಿಭಾವ, ನೀನೇ ಗೆದ್ದೆ" ಎಂದಿತು.

ಏಡಿ "ಊಂ, ಹಾಗೆ, ಆ ರೀತಿ ಮರ್ಯಾದೆಯಾಗಿ ಕರೆಯುವುದನ್ನ



ಕಲಿತುಕೊ. 'ನನ್ನಷ್ಟು ಬುದ್ಧಿವಂತರಿಲ್ಲ' ಎಂಬ ಅಹಂಕಾರ ಯಾರಿಗೂ ಸಲ್ಲದು. ಈಗಲಾದರೂ ತಿಳಿದುಕೊ" ಎಂದಿತು.

ನರಿ ಬಾಯಿ ಬಿಚ್ಚದೆ ಬಾಲ ಮುದುರಿಕೊಂಡು ಅಲ್ಲಿಂದ ಜಾರಿತು.

ಕಾಗೆ ನಡೆದುದನ್ನೆಲ್ಲಾ ಏಡಿಯಿಂದ ಕೇಳಿ ತಿಳಿದುಕೊಂಡು "ತಮ್ಮಾ, ಒಂದು ಸಾರಿ ಈ ನರಿ ನನ್ನ ಸಂಗೀತ ಕೇಳಲು ಬಂದಂತೆ ಬಂದು, ನನ್ನನ್ನು ಮೋಸಮಾಡಿ, ನನ್ನ ಬಾಯಿಂದ ಬಿದ್ದುಹೋದ ಮಾಂಸದ ತುಂಡನ್ನು ಕಚ್ಚಿಕೊಂಡು ಓಡಿತು. ನೀನು ಹೇಳಿದಂತೆ ಗರ್ವಿಷ್ಠನೊಬ್ಬನಿದ್ದರೆ ಅವನ ಹೆಮ್ಮೆಯನ್ನು ಮುರಿಯುವನೊಬ್ಬ ನಿದ್ದೇಯಿರುತ್ತಾನೆ. ಚೆನ್ನಾಗಿ ಬುದ್ಧಿ ಕಲಿಸಿದೆ" ಎಂದು ಹೇಳಿ ಹಾರಿ ಹೋಯಿತು.




ಸಪ್ತಸಮುದ್ರಗಳ ಆಚೆಯಿದೆ ನವದ್ವೀಪ. ಆ ದ್ವೀಪದ ಮಧ್ಯ ಒಂದು ಕೋಟೆ. ಆ ಕೋಟೆಗೆ ಸೇರಿದಂತೆ ಒಂದು ಭಾರಿ ತೋಟ. ಆ ತೋಟದ ನಡುವೆ ಒಂದು ದಿವ್ಯವಾದ ಭವನ. ಭವನದ ಸುತ್ತಲೂ ಮಾನವ ಮಾತ್ರರು ದಾಟಲು ಶಕ್ಯವಿಲ್ಲದಂಥ ಏಳು ಕಂದಕಗಳು. ಭವನದಲ್ಲಿರುವುದು ಆ ದ್ವೀಪವನ್ನು ಪಾಲಿಸುವ ದಿಲೀಪ ಮಹಾರಾಜನ ಮಗಳು ಅಪರೂಪಸುಂದರಿ. ರಾಜಕುಮಾರಿ ಒಂದು ಶಪಥ ಮಾಡಿದ್ದಳು. "ಯಾರು ಈ ಸಪ್ತಸಮುದ್ರಗಳನ್ನೂ ದಾಟಿ, ಆ ಕಂದಕಗಳನ್ನು ದಾಟಿ, ತನ್ನ ಭವನವನ್ನು ಸೇರಿಕೊಳ್ಳುವರೋ ಆತನನ್ನು ವಿವಾಹವಾಗುವೆನು" ಎಂದು. ಅದನ್ನು ಕೇಳಿ ದೇಶ ದೇಶಗಳಿಂದ ಎಷ್ಟೆಷ್ಟೋ ಜನ ರಾಜಕುಮಾರರು ಬರುತ್ತಿದ್ದರು. ಬಂದವರು ಆ ಏಳು ಕಂದಕಗಳಲ್ಲಿ ಯಾವುದೋ ಒಂದರಲ್ಲಿ ಬಿದ್ದುಹೋಗುತ್ತಿದ್ದರೇ ಹೊರತು, ಯಾರೂ ಜಯಶಾಲಿಗಳಾಗುತ್ತಿರಲಿಲ್ಲ.

ಹೀಗೆ ಹೊರಟವರಲ್ಲಿ ಕುಂತಳ ದೇಶದ ರಾಜಕುಮಾರನಾದ ಕಳಾಧರ ಒಬ್ಬ. ಆತನು ಮರದ ಬೊಂಬೆಗಳನ್ನು ಕೆತ್ತುವುದರಲ್ಲಿ ತುಂಬಾ ಚತುರ. ಕಳಾಧರ ಒಂದು ದೊಡ್ಡ ಹಡಗಿನಲ್ಲಿ ಪ್ರಯಾಣ ಮಾಡಿದ. ದಾರಿ ಮಧ್ಯ ಒಂದು ಬಿರುಗಾಳಿ ಎದ್ದಿತು. ಕಳಾಧರನು ಹಡಗನ್ನು ಹತ್ತಿರದಲ್ಲಿದ್ದೊಂದು ದ್ವೀಪಕ್ಕೆ ಸೇರಿಸಿ ಕಾಲ ಕಳೆಯಲು ತನ್ನ ಹತ್ತಿರವಿದ್ದ ಸಾಮಗ್ರಿಗಳಿಂದ ಮರದ ಗಿಣಿಗಳನ್ನು ಕೆತ್ತಲು ಆರಂಭಿಸಿದ. ಒಂದು ನೂರು ಗಿಣಿಗಳನ್ನು ಕೆತ್ತಿದ. ಅವುಗಳಿಗೆ ಸೊಗಸಾದ ಬಣ್ಣ ಹಾಕಿದ.

ಇಷ್ಟರಲ್ಲಿ ಬಿರುಗಾಳಿ ಅಡಗಿತು. ಕಳಾಧರ ತನ್ನ ನೂರು ಗಿಣಿಗಳೊಂದಿಗೆ ಮತ್ತೆ ಹೊರಟ. ಅದೇ ಸಮಯಕ್ಕೆ ಬ್ರಹ್ಮನು ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ. ಸಮುದ್ರ ಮಧ್ಯದಲ್ಲಿ ಏಕಾಕಿಯಾಗಿ ಪ್ರಯಾಣ ಮಾಡುತ್ತಿದ್ದ ಕಳಾಧರನನ್ನು ನೋಡಿ ಆಶ್ಚರ್ಯ ಹೊಂದಿದ. ಆತನ ಹತ್ತಿರವಿದ್ದ ನೂರು

ಆರ್. ಪಾರ್ಥಸಾರಥಿ, ತಾತಾನಗರ.

ಮರದ ಗಿಣಿಗಳನ್ನು ಕಂಡು ವಿಸ್ಮಯದಿಂದ "ಆಹಾ, ಎಷ್ಟು ಚಾತುರ್ಯದಿಂದ ಕೆತ್ತಿದ್ದಾನೆ. ಜೀವಕಳೆಯಿಂದ ತುಂಬಿ ತುಳುಕಾಡುವಂತಿದೆ. ಇದಕ್ಕೆ ಉಸಿರು ತುಂಬಿದರೆ...." ಎಂದುಕೊಂಡ. ಅಂದು ಕೊಳ್ಳುವುದೇನು ಬಂತು, ಅವುಗಳಿಗೆ ಜೀವ ತುಂಬಿದ. ಕೂಡಲೇ ಕಳಾಧರನ ಹಡಗಿನಲ್ಲಿದ್ದ ನೂರು ಗಿಣಿಗಳೂ ರಪರಪನೆ ರೆಕ್ಕೆ ಬಡಿಯುತ್ತಾ ಹಾರಿ ಹೋದವು.

ಗಿಣಿಗಳು ಈ ರೀತಿ ಹಾರಿ ಹೋಗಲು ಕಳಾಧರನಿಗೆ ಆಶ್ಚರ್ಯವಾಯಿತು.

ಬಹು ಕಷ್ಟಗಳನ್ನು ಅನುಭವಿಸಿ ಆರು ಸಮುದ್ರಗಳನ್ನು ದಾಟಿದ. ಏಳನೇ ಸಮುದ್ರ ಸೇರುವ ವೇಳೆಗೆ ಮತ್ತೊಂದು ದೊಡ್ಡ ಬಿರುಗಾಳಿ ಬೀಸಿತು. ಹಡಗು ನುಚ್ಚುನೂರಾಗಿ ಒಡೆಯಿತು. ಆತನು ನಾನಾ ಅವಸ್ಥೆಪಟ್ಟು ತೀರವನ್ನು ಸೇರಿಕೊಂಡ.

ತಾನು ಯಾವ ದೇಶವನ್ನು ಸೇರಿದನೋ ಆತನಿಗೆ ತಿಳಿಯದು. ಅಲ್ಲಿರುವವರನ್ನು ವಿಚಾರಿಸಲು ಅದೇ ನವದ್ವೀಪವೆಂದು ತಿಳಿದು ಬಂತು. ಆನಂದಭರಿತನಾದ ಕಳಾಧರನು ಕ್ಷಣವಾದರೂ ತಡಮಾಡದೆ ನೆಟ್ಟಗೆ ರಾಜನ ಹತ್ತಿರ ಹೋದ.

ನವಮೋಹನಾಕಾರನಾದ ಕಳಾಧರನನ್ನು ಕಂಡು ರಾಜ ಮರುಳಗೊಂಡ. ತನ್ನ ಮಗಳು ಮಾಡಿದ ಪ್ರತಿಜ್ಞೆಯನ್ನು ತಿಳಿಸಿದ. ಇದಕ್ಕಾಗಿ ಬಂದ ಎಷ್ಟೋ ಜನ ಶೂರರೂ, ವೀರರೂ



ಮಡಿದರೆಂತಲೂ, ಆದ್ದರಿಂದ ಅಸಾಧ್ಯವಾದ ಈ ಪ್ರಯತ್ನ ಮಾಡುವುದು ಕ್ಷೇಮಕರವಲ್ಲವೆಂತಲೂ ಎಚ್ಚರಿಕೆ ಕೊಟ್ಟ.

"ನನಗೆ ಅಸಾಧ್ಯವೆನ್ನುವುದು ಯಾವುದೂ ಇಲ್ಲ. ನನ್ನ ಶಕ್ತಿ ಸಾಮರ್ಥ್ಯಗಳನ್ನು ಅರಿತೇ ಬಂದಿದ್ದೇನೆ" ಎಂದ ಕಳಾಧರ. ಬ್ರಹ್ಮಾಂಡವಾದ ಮಹಾದ್ವಾರವನ್ನು ತೆರೆದು ಆತನನ್ನು ಒಳಗೆ ಬಿಟ್ಟ ದ್ವಾರಪಾಲಕ. ದ್ವಾರವನ್ನು ದಾಟಿದ ಕೂಡಲೇ ಆ ಪ್ರದೇಶವೆಲ್ಲಾ ನಿರ್ಜನವಾಗಿ ಕಂಡು ಬಂತು. ತುಸದೂರದಲ್ಲಿ ಆಳವಾದ ಒಂದು ಕಂದಕ ಕಾಣಿಸಿತು. ಅದರಲ್ಲೇನೂ ಇರಲಿಲ್ಲ. ಧೈರ್ಯಶಾಲಿಯಾದ ಕಳಾಧರ ಅದನ್ನು ಅತ್ಯಂತ ಸುಲಭವಾಗಿ ದಾಟಿದ.

ಸ್ವಲ್ಪದೂರದಲ್ಲಿ ಮೊದಲಿನ ಕಂದಕದಷ್ಟೇ



ಆಳ ಮತ್ತು ಅಗಲವಾದ ಮತ್ತೊಂದು ಕಂದಕ ಕಾಣಿಸಿತು. ಈ ಕಂದಕದ ತುಂಬಾ ಉರಿಯುವ ಜ್ವಾಲೆಗಳಿದ್ದುವು. ಆದರೂ ಒಂದು ಕಂದಕ ದಾಟಿದ್ದುದರಿಂದ ಅದೇ ಉಪಾಯದಿಂದ, ಚಾಕಚಕ್ಯತೆಯಿಂದ ಇದನ್ನೂ ದಾಟಿಬಿಟ್ಟ.

ಮುಂದಿನ ಕಂದಕದಲ್ಲಿ ಭೋರೆಂದು ಪ್ರವಹಿಸುತ್ತಿರುವ ನೀರಿತ್ತು. ಕಳಾಧರ ಹಾರಿದ, ಆದರೆ ಪಾಪ ತುಸ ಮಾತ್ರದಲ್ಲಿ ಗುರಿ ತಪ್ಪಿ ನೀರಿನಲ್ಲಿ ಬಿದ್ದು ಬಿಟ್ಟ. ಕಂದಕದ ಗೋಡೆಗಳೆಲ್ಲಾ ತುಂಬಾ ನುಣುಪಾಗಿದ್ದುದರಿಂದ ಕೈಗೆ ಹಿಡಿತ ಸಿಕ್ಕಲಿಲ್ಲ. ಆದ್ದರಿಂದ ಮೇಲೆ ಬರಲು ಸಾಧ್ಯವಿಲ್ಲವಾಯಿತು. ಮತ್ತೇನೂ ಮಾಡಲಾರದೆ ಆತನು ಅಲ್ಲೇ ಹಾಗೇ ಈಸುತ್ತಾ ನೀರಿನಮೇಲೆ ತೇಲುತ್ತಿದ್ದ.

ಸ್ವಲ್ಪ ಹೊತ್ತಿಗೆಲ್ಲಾ ಕಿಲಕಿಲನೆಂದು ಕೆಲವು ಗಿಣಿಗಳು ಒಂದು ಹಲಗೆ ತಂದು ಕಂದಕದಲ್ಲಿ ಬೀಳಿಸಿದವು. ಅದನ್ನು ಹಿಡಿದುಕೊಂಡು ಕಳಾಧರ ಅದರಮೇಲೆ ಕುಳಿತ. ಇದರಿಂದ ಆತನು ಈಜಾಡುತ್ತಿರಬೇಕಾದ ತೊಂದರೆ ತಪ್ಪಿತು. ಅಷ್ಟರಲ್ಲಿ ಮತ್ತೆ ಕೆಲವು ಗಿಣಿಗಳು ಒಂದು ಹಗ್ಗ ಹೊತ್ತುಕೊಂಡು ಬಂದು, ಅದನ್ನು ಒಂದು ಮರಕ್ಕೆ ಕಟ್ಟಿ ಮತ್ತೊಂದು ಕೊನೆಯನ್ನು ಕಂದಕದಲ್ಲಿ ಬೀಳಿಸಿದುವು. ಅದನ್ನು ಹಿಡಿದುಕೊಂಡು ಕಳಾಧರ ಮೇಲಕ್ಕೆ ಬಂದ. ಆತನು ಕಟ್ಟೆಯ ಮೇಲೆ ಬರುವ ವೇಳೆಗೆ ಹಣ್ಣು ಹಂಪಲು ಸಿದ್ಧವಾಗಿದ್ದುವು. ಅವುಗಳನ್ನು ಭುಜಿಸಿ, ಆತನು ಆಯಾಸ ಪರಿಹರಿಸಿಕೊಂಡ. ಮನಸ್ಸು ನೆಮ್ಮದಿಯಾದ ಬಳಿಕ ನೋಡಲು ಆ ಹಲಗೆ ತನ್ನ ಹಡಗಿಗೆ ಜೋಡಿಸಿದ್ದ ಹಲಗೆ ಎಂತಲೂ, ಆ ಹಗ್ಗ ತನ್ನ ಹಡಗಿಗೆ ಕಟ್ಟಿದ್ದ ಹಗ್ಗವೆಂತಲೂ ತಿಳಿಯಿತು. ತನ್ನನ್ನು ಕಾಪಾಡಿದ ಆ ಗಿಣಿಗಳು ತಾನು ನಿರ್ಮಿಸಿದ ಮರದ ಗಿಣಿಗಳೇ ಎಂದು ತಿಳಿದು ಬಂತು. ಆತನು ನೋಡುನೋಡುತ್ತಿದ್ದಂತೆಯೇ ಅವು ಹಾರಿ ಹೋದವು.

ವಿಚಿತ್ರವಾದ ಈ ಸಂಘಟನೆಗೆ ಅಚ್ಚರಿಗೊಂಡು ಮುಂದಕ್ಕೆ ಸಾಗಿದ ಕಳಾಧರ. ಆ ತರುವಾಯ ದಾಟಬೇಕಾದ ಕಂದಕಗಳು ಒಂದಕ್ಕಿಂತ ಒಂದು ಬಹು ಭೀಕರವಾಗಿ ಕಾಣಿಸಿದವು. ನಾಲ್ಕನೇ ಕಂದಕದಲ್ಲಿ ನಾಗರ ಹಾವುಗಳು ಬುಸಗುಟ್ಟುತ್ತಾ ವಿಷ ಕಾರು

ತ್ತಿದ್ದವು. ಅದನ್ನು ಚಾತುರ್ಯದಿಂದ ದಾಟಿದ. ಐದನೇಯದರಲ್ಲಿ ಹಸಿದಿದ್ದ ಸಿಂಹಗಳೂ, ಅನೇಕ ಕಾಡುಮೃಗಗಳೂ ಘರ್ಜಿಸುತ್ತಿದ್ದವು. ಕಳಾಧರನು ಅವುಗಳಿಗೆ ಸಿಕ್ಕದೆ ಆ ಕಂದಕವನ್ನೂ ದಾಟಿದ. ಆರನೇಯದರಲ್ಲಿ ಕ್ರೂರವಾದ ಮೊಸಳೆಗಳೂ, ಇತರ ಜಲಚರಗಳೂ ಬಾಯ್ದೆರೆದು ಕಾದಿದ್ದುವು. ಚತುರನಾದ ಕಳಾಧರನು ಆ ಕಂದಕವನ್ನೂ ಯಾವುದೇ ವಿಧವಾದ ಅಪಾಯವಿಲ್ಲದೆ ದಾಟಿದ.

ಈ ರೀತಿ ಆರು ಕಂದಕಗಳನ್ನೂ ದಾಟಿಕೊಂಡು ಬಂದ. ಇನ್ನೊಂದೇ ಮಿಕ್ಕಿತ್ತು. ಅದನ್ನು ದಾಟಿಬಿಟ್ಟರೆ ನೆಟ್ಟಗೆ ಭವನದೊಳಕ್ಕೆ ಹೋಗಿ ರಾಜಕುಮಾರಿಯ ಕೈ ಹಿಡಿಯುವುದೇ ಉಳಿದಿರುವ ಕಾರ್ಯ. ಆರು ಕಂದಕಗಳನ್ನು ದಾಟಿದವನಿಗೆ ಇನ್ನೊಂದು ದಾಟುವುದೇನು ಕಷ್ಟ' ಎಂದು ಧೈರ್ಯದಿಂದ ಮುಂದಕ್ಕೆ ನಡೆದ.

ಕಟ್ಟಕಡೆಗೆ ಏಳನೇ ಕಂದಕ ಬಂತು. ಇದರಲ್ಲಿ ಮೊನಚಾದ ಶೂಲಗಳನ್ನು ಸಾಲುಸಾಲಾಗಿ ಜೋಡಿಸಿದ್ದಾರೆ. ಇದನ್ನು ದಾಟುವುದು ತುಂಬಾ ಸುಲಭವೆಂದು ತೋರಿತು ಕಳಾಧರನಿಗೆ. ಒಂದು ಸಾರಿ ಆತ ಬಲವೆಲ್ಲಾ ಬಿಟ್ಟು ಹಾರಿದ. ಹಾರಿದನೇನೋ ಹೌದು. ಆದರೆ ಕಾಲು ಜಾರಿ ಆ ಕಂದಕದಲ್ಲಿ ಬಿದ್ದುಬಿಟ್ಟ ಪಾಪ. ಬೀಳುವುದೇನು ಬಂತು. ಮೊನಚಾದ ಶೂಲಗಳು ಚುಚ್ಚಿಕೊಂಡು ಕೂಡಲೇ ಪ್ರಾಣವನ್ನು ಬಿಟ್ಟ.



ಇಂದಿಗೆ ಕಳಾಧರನು ಇಲ್ಲಿಗೆ ಪ್ರವೇಶಿಸಿ ಏಳು ದಿನಗಳಾದವು ಆತನ ಅವಸ್ಥೆ ಏನಾಗಿದೆಯೋ ನೋಡಲು ರಾಜನು ಹೊರಟು ಬಂದ. ರಾಜನು ಬರುವ ವೇಳೆಗೆ ಕಂದಕದಲ್ಲಿ ಬಿದ್ದಿದ್ದ ಕಳಾಧರನು ಕಾಣಿಸಿದ. ಆತನ ಸುತ್ತಲೂ ಲೆಕ್ಕವಿಲ್ಲದಷ್ಟು ಗಿಣಿಗಳು ಸುತ್ತಿಕೊಂಡು ಚಿಂತೆಯಿಂದ ಕೂಗಾಡುತ್ತಿದ್ದುವು.

ಈ ದೃಶ್ಯವನ್ನು ಕಂಡು ರಾಜನ ಮನ ಕರಗಿ ನೀರಾಯಿತು. 'ಬಾಯಿಯಿಲ್ಲದ ಈ ಗಿಣಿಗಳಿಗಿರುವಷ್ಟು ಜ್ಞಾನವಾದರೂ ನನ್ನ ಮಗಳಿಗೆ ಇಲ್ಲವಲ್ಲಾ ಈ ಧೂರ್ತಳ ಕಾರಣದಿಂದ ಇನ್ನು ಯಾರೂ ಬಲಿಯಾಗಲು ಅವಕಾಶಕೂಡದು. ಈ ದಾರುಣಕಾರ್ಯ ಇಲ್ಲಿಗೇ ಮುಕ್ತಾಯವಾಗಬೇಕು. ಇಲ್ಲ, ಆ ದುಷ್ಟಳಾದರೂ ಬಲಿಯಾಗಬೇಕು' ಎಂದು

ನಿರ್ಧರಿಸಿದ. ನೇರವಾಗಿ ಮಗಳ ಹತ್ತಿರ ಹೋಗಿ "ಎಲೈ ದುಷ್ಟೆ, ನಿನ್ನಮೂಲಕ ಎಷ್ಟು ಜನ ಪ್ರಾಣ ಬಿಡುತ್ತಿರುವರೋ ನೀನು ಗ್ರಹಿಸುತ್ತಿಲ್ಲ. ನಿನ್ನ ಶಪಥ ಬಿಟ್ಟೆಯೋ ಸರಿ, ಇಲ್ಲ. ನೀನೇ ಇಂದು ಬಲಿಯಾಗುವೆ. ನಿನ್ನ ಮೂರ್ಖತೆಯಿಂದಾಗಿ ಎಂಥ ಸುಕುಮಾರ ರಾಜಕುಮಾರನನ್ನು ನೀನು ಹೊಟ್ಟೆಯಲ್ಲಿ ಹಾಕಿಕೊಂಡೆಯೋ ನೋಡುವೆಯುಂತೆ ಬಾ" ಎಂದು ದರದರನೆಳೆದುಕೊಂಡು ಹೋದ.

ರಾಜನು ಹಿಂದಿರುಗುವ ವೇಳೆಗೆ ಒಂದು ವಿಚಿತ್ರ ನಡೆಯುತಿತ್ತು. ಗಿಣಿಗಳು ಕೆಲವು ಕಳಾಧರನ ಎದೆಯಮೇಲೆ ಕುಳಿತು ಯಾವುದೋ ಎಲೆಗಳನ್ನು ಬಾಯಿಂದ ಹಾಕಿ ತಿಕ್ಕತಿತ್ತು. ಮತ್ತೆ ಕೆಲವು ಗಿಣಿಗಳು ಬೇರುಗಳನ್ನು ಕಚ್ಚಿಕೊಂಡು, ಶೂಲದ ಮೊನೆಗಳು ಚುಚ್ಚಿಕೊಂಡಿರುವ ಸ್ಥಳಗಳಲ್ಲಿ ಲೇಪಿಸುತ್ತಿದ್ದವು. ಮಿಕ್ಕ ಗಿಣಿಗಳು ಪ್ರಶಸ್ತವಾದ ಫಲಗಳನ್ನು ಬಾಯಿಯಲ್ಲಿ ಕಚ್ಚಿಕೊಂಡು ಸಿದ್ಧವಾಗಿದ್ದುವು.

ಕಳಾಧರ ಸ್ವಲ್ಪ ಕದಲಾಡಲು ಪ್ರಾರಂಭಿಸಿದ. ತನ್ನ ತಪ್ಪನ್ನು ಕ್ಷಮಿಸುವಂತೆ ರಾಜಕುಮಾರಿ ತಂದೆಯ ಪಾದಗಳಮೇಲೆ ಬಿದ್ದಳು. ರಾಜನು ಆಜ್ಞಾಪಿಸಿದ ತಕ್ಷಣವೇ ಆಸ್ಥಾನ ವೈದ್ಯರು ಬಂದರು. ಕಳಾಧರನಿಗೆ ಚಿಕಿತ್ಸೆ ಮಾಡಿದರು. ರಾಜನ ಪರಿವಾರವೆಲ್ಲಾ ಪರಿಪರಿವಿಧದಲ್ಲಿ ಉಪಚಾರ ಮಾಡಿದರು. ಸ್ವಲ್ಪ ಸುಧಾರಿಸಿದಮೇಲೆ ಆತನನ್ನು ಅರಮನೆಯೊಳಕ್ಕೆ ಕರೆದುಕೊಂಡು ಹೋದರು. ಗಿಣಿಗಳೂ ಸಹ ಆತನೊಂದಿಗೆ ಕೋಟೆಯನ್ನು ಸೇರಿದವು. ಕೆಲಕಾಲಕ್ಕೆ ಕಳಾಧರನ ಗಾಯಗಳು ಗುಣವಾದವು. ರಾಜನು ತನ್ನ ಮಗಳನ್ನು ಕೊಟ್ಟು ಅತಿವೈಭವಾಗಿ ಮದುವೆ ಮಾಡಿದ.

ಪ್ರಾಣದಾತರಾದ ಆ ನೂರು ಗಿಣಿಗಳಿಗೂ ನೂರು ಬಂಗಾರದ ಪಂಜರಗಳು ಸಿದ್ಧವಾದವು. ಎಷ್ಟೋ ಆಪ್ಯಾಯಮಾನವಾಗಿ ಆ ನೂತನ ದಂಪತಿಗಳು ಅವುಗಳನ್ನು ಪಂಜರಗಳಲ್ಲಿಟ್ಟು, ಅವಕ್ಕೆ ಬೇಕಾದ ಅವಶ್ಯಕತೆಗಳನ್ನು ಒದಗಿಸುತ್ತಿದ್ದರು. ಬೆಳಗ್ಗೆ ಪಂಜರಗಳನ್ನು ತೆಗೆದು ನೋಡಲು, ಆ ನೂರು ಗಿಣಿಗಳೂ ಕಳಾಧರನು ತಯಾರಿಸಿದ ಮರದ ಗಿಣಿಗಳಾಗಿ ರೂಪ ಬದಲಾಯಿಸಿದ್ದವು.






**ಗೋ**ದಾವರಿ ಜಿಲ್ಲೆ ಪೆನುಕೊಂಡ ಗ್ರಾಮದಲ್ಲಿ ಬಹಳ ಜನ ವೈಶ್ಯರಿರುವರು. ಅವರಲ್ಲೆಲ್ಲಾ ಕುಸುಮಶ್ರೇಷ್ಠಿ ಸಕಲ ಐಶ್ವರ್ಯ ಸಂಪನ್ನನು. ಒಳ್ಳೇ ಕೆಲಸಗಳಲ್ಲಿ ಆಸಕ್ತಿಯುಳ್ಳವನು. ಆತನ ಹೆಂಡತಿ ಕುಸುಮಾಂಬ ಸಹ ಧರ್ಮಪರಾಯಣೆ. ಎಲ್ಲರ ಮನ್ನಣೆಗೆ ಪಾತ್ರಳಾಗಿದ್ದಳು. ಆದ್ದರಿಂದ ಪುಣ್ಯವಂತರಾದ ಆ ದಂಪತಿಗಳ ಮೇಲೆ ವೈಶ್ಯಕುಲದವರಿಗೆಲ್ಲಾ ಭಕ್ತಿವಿಶ್ವಾಸ ಉಂಟಾಗಿತ್ತು.

ಕುಸುಮಶ್ರೇಷ್ಠಿಗೆ ಎಲ್ಲ ವಿಷಯಗಳಲ್ಲೂ ಅನುಕೂಲವಾಗಿದ್ದರೂ, ಸಂತತಿಯ ವಿಚಾರದಲ್ಲಿ ಮಾತ್ರ ಲೋಪವುಂಟಾಗಿ ಆತನನ್ನು ಚಿಂತಾಮಗ್ನನನ್ನಾಗಿ ಮಾಡಿತ್ತು. ಸಂತತಿಗಾಗಿ ಆ ದಂಪತಿಗಳು ಮಾಡದ ಪೂಜೆಯಿಲ್ಲ; ಆಚರಿಸದ ವ್ರತವಿಲ್ಲ. ಆದರೂ ಫಲವಿಲ್ಲದಾಗಿತ್ತು. ಕೊನೆಗೆ ವೇದಪಾರಂಗತರಾದ ಬ್ರಾಹ್ಮಣರು ಆತನನ್ನು ಕುರಿತು "ಅಯ್ಯಾ ಶ್ರೇಷ್ಠಿ, ನೀನು ಪುತ್ರಕಾಮೇಷ್ಠಿ ಯಾಗಮಾಡಿದರೆ, ನಿನ್ನ ಕೋರಿಕೆ ದ್ವಿಗುಣೀಕೃತವಾಗಿ ಫಲಿಸುವುದು" ಎಂದು ಸಲಹೆ ಕೊಟ್ಟರು.

ಅವರ ಸಲಹೆಯನ್ನು ಶಿರಸಾವಹಿಸಿ, ಶ್ರೇಷ್ಠಿ ಕೂಡಲೇ ಯಜ್ಞಕ್ಕೆ ಏರ್ಪಾಟು ಮಾಡಿದ. ತುಂಬಾ ಭಕ್ತಿ ಶ್ರದ್ಧೆಗಳಿಂದ ಆ ದಂಪತಿಗಳೇ ಯಾಗವನ್ನು ಪೂರ್ತಿಮಾಡಲು, ಅಗ್ನಿಕುಂಡದಿಂದ ದೇವಿ ಪ್ರತ್ಯಕ್ಷಳಾಗಿ ಅವರಿಗೆ ಫಲಗಳನ್ನು ಅನುಗ್ರಹಿಸಿದಳು. ಆ ಫಲಗಳನ್ನು ಅವರು ಸಂತೋಷದಿಂದ ಭುಜಿಸಿದರು.

ಕೆಲವು ದಿನಗಳಾದಮೇಲೆ ಕುಸುಮಾಂಬ ಗರ್ಭಧರಿಸಿದಳು. ಮತ್ತೆ ಕೆಲವು ತಿಂಗಳ ನಂತರ ದೇವಿಯ ಕಟಾಕ್ಷದಿಂದ ಆಕೆಯ ಹೊಟ್ಟೆಯಲ್ಲಿ ಅಪರೂಪಸುಂದರರಾದ ಇಬ್ಬರು ಅವಳಿಮಕ್ಕಳು ಜನಿಸಿದರು. ಒಂದು ಗಂಡು, ಇನ್ನೊಂದು ಹೆಣ್ಣು ಮಗು. ಮಗಳಿಗೆ ವಾಸವಾಂಬಿಕೆಯೆಂದೂ, ಮಗನಿಗೆ ವಿರೂಪಾಕ್ಷನೆಂದೂ ನಾಮಕರಣ ಮಾಡಿ, ಮಾತಾಪಿತೃಗಳು ಅವರನ್ನು ಅತಿ ಮಮತೆಯಿಂದ ಸಲಹುತ್ತಿದ್ದರು. ವರಪ್ರಸಾದದಿಂದ ಜನಿಸಿದ ಆ ಮಕ್ಕಳು ಬಹು ಶೀಘ್ರವಾಗಿ ಸಕಲ ವಿದ್ಯೆಗಳಲ್ಲೂ ಪ್ರವೀಣರಾಗಿ, ಯೌವನವಂತರಾದರು.

ಸಿ. ವಿ. ರಮಣಿ, ಕೃಷ್ಣರಾಜನಗರ.






ಕುಸುಮಶ್ರೇಷ್ಠಿ ಪೆನುಕೊಂಡದಲ್ಲಿರುವ ಕಾಲದಲ್ಲಿ ವೇಗಿ ದೇಶವನ್ನು ವಿಷ್ಣುವರ್ಧನ ವಿಮಲಾದಿತ್ಯನು ಪಾಲಿಸುತ್ತಿದ್ದನು. ವೇಗಿ ದೇಶಕ್ಕೆ ಮುಖ್ಯ ಪಟ್ಟಣ ರಾಜಮಹೇಂದ್ರವರ. ಒಂದು ಸಾರಿ ವಿಮಲಾದಿತ್ಯನು ಕಳಿಂಗ ದೇಶದಮೇಲೆ ದಂಡೆತ್ತಿ ಹೋಗಿ ಜಯಶಾಲಿಯಾದ. ಆದರೆ ಕಳಿಂಗ ರಾಜನು ಕೂಡಲೇ ಮತ್ತೆ ಸೈನ್ಯವನ್ನು ಜಮಾವಣೆ ಮಾಡಿಕೊಂಡು ಬಂದು ವಿಮಲಾದಿತ್ಯನನ್ನು ಸೋಲಿಸಿದ.

ಈ ಧಾಳಿ, ದಂಡೆಯಾತ್ರೆಗಳು ನಡೆದ ಸಮಯದಲ್ಲಿ ವೇಗಿರಾಜ್ಯ ಅಲ್ಲಕಲ್ಲೋಲವಾಯಿತು. ಅರಾಜಕತೆಯನ್ನು ಅಣಗಿಸುವ ಸಂಕಲ್ಪದಿಂದ ಸಾಮಂತ ರಾಜನಾದ ಕುಡ್ಯವರ್ಧನನ್ನೂ, ದಂಡನಾಯಕನಾದ ನೃಪಕಾಯನನ್ನೂ, ಅಮಾತ್ಯಶಿಖಾಮಣಿಯಾದ ವಿಜ್ಜಿಯನ್ನೂ ಸಂಗಡ ಕರೆದುಕೊಂಡು ವಿಮಲಾದಿತ್ಯನು ಸಂಚಾರ ಹೊರಟ. ಸಂಚಾರದಲ್ಲಿ ರಾಜನು ಪೆನುಕೊಂಡದ ಸಮೀಪದಲ್ಲಿ ತಂಗಿದನು.

ರಾಜನು ಬಂದ ಸಮಾಚಾರ ತಿಳಿದ ಕೂಡಲೇ ಪೆನುಕೊಂಡದಲ್ಲಿದ್ದ ವೈಶ್ಯ ಪ್ರಮುಖರು ಆತನನ್ನು ಸಂದರ್ಶಿಸಿ, ಉಚಿತ ಸತ್ಕಾರಗಳೊಂದಿಗೆ ಆತನನ್ನು ಗ್ರಾಮಕ್ಕೆ ಕರೆದುಕೊಂಡು ಬಂದರು. ಶ್ರೀಮಂತರಿಗೆ ಅಸಾಧ್ಯವಾದುದಾದರೂ ಏನಿದೆ? ಅವರು ರಾಜನಿಗೆ ಮಾಡಿದ ಸತ್ಕಾರವನ್ನು ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ.

ಅವರು ರಾಜನನ್ನು ತಮ್ಮ ಗ್ರಾಮದಲ್ಲಿ ವೈಭವದಿಂದ ಮೆರವಣಿಗೆ ಮಾಡಿಸಿದರು. ಮೆರವಣಿಗೆ ಮುಗಿದಕೂಡಲೇ ಎಲ್ಲರೂ ಒಂದು ಭಾರಿ ಮಂಟಪವನ್ನು ಸೇರಿದರು. ಅಲ್ಲಿ ಅನೇಕ ಜನ ವೈಶ್ಯ ಸ್ತ್ರೀಯರು ಒಡವೆ ವಸ್ತ್ರಗಳಿಂದ ಅಲಂಕಾರ ಮಾಡಿಕೊಂಡು ಸಿದ್ಧರಾಗಿದ್ದರು. ಮಹಾರಾಜನಿಗೆ ಮಂಗಳ ಆರತಿ ಮಾಡಿದರು.

ವೈಶ್ಯಪ್ರಮುಖರ ಸನ್ಮಾನಕ್ಕೆ ವಿಮಲಾದಿತ್ಯನು ಸಂಪ್ರೀತನಾದನು. ಆ ಆನಂದದಲ್ಲಿ ಆತನು "ನಮ್ಮ ಕ್ಷೇಮಕೋರಿದ ಈ ಮುತ್ತೈದೆಯರಿಗೆ ಮಂಗಳಕರವಾದ ತಾಂಬೂಲ ಕೊಡಲು ನಿಶ್ಚಯಿಸಿರುವೆವು. ಯಾರಿಗೆ ಕೊಡಲಿ?" ಎಂದು ಪ್ರಶ್ನೆ ಮಾಡಿದ.



ಆಗ ಒಬ್ಬ ಮುದುಕಿ ಎದ್ದು ನಿಂತು "ಪ್ರಭೂ ನಮ್ಮ ಕುಲಕ್ಕೆ ಕುಸುಮಾಂಬದೇವಿ ಯನ್ನೇ ಗ್ರಾಮದಲ್ಲಿ ಹಿರಿಯವಳೆಂದು ನಾವು ಎಣಿಸುವೆವು. ತಾಂಬೂಲ ಸ್ವೀಕರಿಸಲು ಆಕೆಯೇ ಅರ್ಹಳು" ಎಂದು ಹೇಳುತ್ತಾ ಕುಸುಮಾಂಬದೇವಿಯನ್ನು ತೋರಿಸಿದಳು.

ರಾಜನು ಬಯಸಿದಂತೆ ಕುಸುಮಾಂಬ ತಾಂಬೂಲ ಸ್ವೀಕರಿಸಲು ಹೋದಳು. ರಾಜನು ತಾಂಬೂಲ ಕೊಡುತ್ತಾ ಕುಸು ಮಾಂಬಳ ಪಕ್ಕದಲ್ಲಿಯೇ ಇದ್ದ ವಾಸವಿ ಯನ್ನು ನೋಡಿ ಆಕೆಯ ಅಂದ ಚೆಂದ ಗಳಿಗೆ ಆತನು ಮಾರುಹೋದನು.



ರಾಜನು ತನ್ನ ಬಿಡಾರಕ್ಕೆ ಹಿಂತಿರುಗಿ ವಾಸವಿಕನ್ಯೆಯನ್ನು ತಾನು ರಾಣಿಯನ್ನಾಗಿ ಮಾಡಿಕೊಳ್ಳಲಿರುವನೆಂದು ಮಂತ್ರಿಗಳ ಸಂಗಡ ಕುಸುಮಶ್ರೇಷ್ಠಿಗೆ ವಾರ್ತೆ ಕಳು ಹಿಸಿದ. ಸಿಡಿಲೆರಗಿದಂತಾಯಿತು ಈ ಮಾತು ಕೇಳಿ ಶ್ರೇಷ್ಠಿಗೆ. ಅವರು ಕ್ಷತ್ರಿಯರು. ನಾವು ವೈಶ್ಯರು. ಈ ಎರಡು ಕೋಮುಗಳಿಗೆ ಎಂದೂ ಸಂಬಂಧವಿಲ್ಲವಲ್ಲ. ಲೋಕಾಚಾರಕ್ಕೆವಿರುದ್ಧ ವಾದ ಇಂತಹ ಕೆಲಸಕ್ಕೆ ನಮ್ಮ ಕುಲದವರು ಅಂಗೀಕರಿಸುವರೇ? ಪ್ರಭುವಾದ ಮಾತ್ರಕ್ಕೆ ಇಂತಹ ವಿಚಿತ್ರ ಕೋರಿಕೆ ಕೇಳುವುದೆಂದ ರೇನು?" ಎಂದು ಆಶ್ಚರ್ಯಪಟ್ಟ ಕುಸುಮ ಶ್ರೇಷ್ಠಿ.

ಇದಕ್ಕೆ ಮಂತ್ರಿಗಳು ಕೋಪಗೊಂಡು "ರಾಜಾಜ್ಞೆ ಎಂದರೆ ಏನೆಂದು ತಿಳಿದು ಕೊಂಡೆಯಯ್ಯಾ ಶ್ರೇಷ್ಠಿ! ತಿರಸ್ಕರಿಸಿದೆಯೋ ನಿಮ್ಮ ಗ್ರಾಮವನ್ನು ಕೊಳ್ಳೆ ಹೊಡೆದು, ಬಲವಂತದಿಂದಲಾದರೂ ನಿನ್ನ ಮಗಳನ್ನು ಕರೆದುಕೊಂಡು ಹೋಗಬಲ್ಲರು ನಮ್ಮ ರಾಜರು. ಆಲೋಚಿಸಿ ನೋಡು" ಎಂದು ಎಚ್ಚರಿಸಿ ಅವರು ಹೊರಟು ಹೋದರು.

ಕೂಡಲೇ ಗ್ರಾಮದ ವೈಶ್ಯರೆಲ್ಲಾ ಸಭೆ ಸೇರಿದರು. "ರಾಜನು ದುಷ್ಟನೆಂಬ ವಿಷಯ ತಿಳಿಯದೇ ಹೋದೆವು. ಮರ್ಯಾದೆ ಮಾಡಿ ಗ್ರಾಮದೊಳಕ್ಕೆ ಕರೆತಂದು ನಮ್ಮ ತಲೆಯ ಮೇಲೆ ನಾವೇ ಚಪ್ಪಡಿ ಹಾಕಿಕೊಂಡಂತೆ ಆಯಿತು." ಎಂದು ಸಂತಾಪಗೊಂಡರು. 'ಕುಲಾಚಾರವನ್ನು ಮೀರುವುದು ತರವಲ್ಲ'



ಎಂದು ಸಮಾಧಾನ ಹೇಳಲು ರಾಜನಲ್ಲಿಗೆ ರಾಯಿಭಾರಿಗಳನ್ನು ಕಳುಹಿಸಿದರು. ಆದರೆ ರಾಜ ಆ ಮಾತುಗಳಿಗೆ ಕಿವಿಗೊಡಲಿಲ್ಲ. ಬಲಿಷ್ಠನಾದ ರಾಜನಿಗೆ ಎದುರು ಹೇಳಲಾರದೆ ಪೆನುಕೊಂಡೆಯ ಪೌರರು ಬೇರೆ ಉದ್ದೇಶದಿಂದ "ಆಗಲಿ" ಎಂದು ಅಂಗೀಕಾರ ಸೂಚಿಸಿ ಆ ಕ್ಷಣಕ್ಕೆ ಮುಪ್ಪು ತಪ್ಪಿಸಿಕೊಂಡರು. ವಿವಾಹದ ಏರ್ಪಾಟಿಗೆ ರಾಜನಲ್ಲಿ ಅವಧಿ ಕೇಳಿ, ಉಪಾಯದಿಂದ ಆತನನ್ನು ಅಲ್ಲಿಂದ ಕಳುಹಿಸಿಯೂ ಬಿಟ್ಟರು.

ರಾಜನು ಹೊರಟು ಹೋದಕೂಡಲೇ ಕುಸುಮಶ್ರೇಷ್ಠಿ ಬೇರೆಬೇರೆ ಊರುಗಳಲ್ಲಿರುವ ತನ್ನ ಬಂಧು ಬಳಗಕ್ಕೆಲ್ಲಾ ಕಾಗದ ಬರೆದು ಅವರನ್ನು ಬರಮಾಡಿಕೊಂಡ. ಪರಿಸ್ಥಿತಿಯನ್ನು ತಿಳಿಸಿ "ಉಪಾಯವೇನು?' ಎಂದು ಕೇಳಿದ. ಅವರಲ್ಲಿ ತೀವ್ರವಾದ ಚರ್ಚೆಗಳು ನಡೆದವು. ವೈಶ್ಯರಲ್ಲಿ ಕೆಲವರು ಮಟ್ಟಿಗೆ ನೆಟ್ಟಗೆ ರಾಜಮಹೇಂದ್ರವರಕ್ಕೆ ಹೋಗಿ, ರಾಜನನ್ನು ದರ್ಶನಮಾಡಿ "ಸ್ವಾಮಿ, ವೈಶ್ಯರೊಂದಿಗೆ ಕ್ಷತ್ರಿಯರು ಸಂಬಂಧ ಬೆಳೆಸುವುದು ಶಾಸ್ತ್ರವಿರುದ್ಧ. ಆದ್ದರಿಂದ ಆಳುವ ಮಹಾ ಸ್ವಾಮಿಯವರು ಈ ಸಂಕಲ್ಪವನ್ನು ಬಿಟ್ಟುಬಿಡಬೇಕು" ಎಂದು ಪ್ರಾರ್ಥಿಸಿದರು.

ಮೂರ್ಖನ ಮನಸ್ಸನ್ನು ಯಾರಿಂದ ಬದಲಾಯಿಸಲು ಶಕ್ಯ? ರಾಜನು ಕುಪಿತನಾಗಿ "ನಮ್ಮ ಆಜ್ಞೆ ಅಕ್ಷರಶಃ ನೆರವೇರಲೇಬೇಕು. ಇಲ್ಲದಿದ್ದ ಪಕ್ಷಕ್ಕೆ ನೀವು ವೀರಕಂಕಣಗಳನ್ನು ಧರಿಸಿ ಸಿದ್ಧರಾಗಿರಿ!" ಎಂದು ಹೇಳಿ, ಕೆಲವು ಭಟರನ್ನು ಪೆನುಕೊಂಡೆಯಲ್ಲಿ ಕಾವಲಿರಿಸಿದನು. ಈ ಗಡಿಬಿಡಿ ನೋಡಿ ಭಯಗೊಂಡು, ಬಂದಿದ್ದ ವೈಶ್ಯರಲ್ಲಿ ಆರುನೂರಹನ್ನೆರಡು ಗೋತ್ರದ ವೈಶ್ಯರು ಪತ್ತೆಯಿಲ್ಲದೆ ಓಡಿಹೋದರು. ಕುಲಾಭಿಮಾನವುಳ್ಳವರು 'ರಾಜನು ಏನು ಮಾಡಬಲ್ಲನೋ ನೋಡೋಣ' ಎಂದು ಧೈರ್ಯದಿಂದ ಕುಸುಮಶ್ರೇಷ್ಠಿಯ ಮನೆಯಲ್ಲೇ ಉಳಿದರು.

ಪರಿಸ್ಥಿತಿ ಈ ರೀತಿಯಿರುವಲ್ಲಿ ವಾಸವಿ ತಂದೆಯ ಬಳಿಗೆ ಹೋಗಿ "ಅಪ್ಪಾ, ನನ್ನನ್ನು ಕುರಿತು ನೀವು ಲೇಶವಾದರೂ ಚಿಂತೆಪಡಬೇಡಿ. ನನ್ನ ವಿವಾಹಕ್ಕೆ ಅಂಗೀಕರಿಸಿ,

ಇಂತಹ ದಿನ ಬರಬೇಕೆಂದು ರಾಜನಿಗೆ ವಾರ್ತೆ ಕಳುಹಿಸಿ" ಎಂದು ವಿನಯಪೂರ್ವಕವಾಗಿ ಕೇಳಿಕೊಂಡಳು. ಇದಕ್ಕಿಂತಲೂ ಹೆಚ್ಚಿಗೆ ವಿವರಗಳೇನನ್ನೂ ಆಕೆ ಹೇಳಲಿಲ್ಲ. ತಂದೆಯೂ ಒತ್ತಿ ಕೇಳಲಿಲ್ಲ.

ಧೈರ್ಯಮಾಡಿ, ಕುಸುಮಶ್ರೇಷ್ಠಿ ಅದೇ ವಿಧವಾಗಿ ಸುದ್ದಿ ಕಳುಹಿಸಿದ.

ಮದುವೆ ಸುಮುಹೂರ್ತದ ದಿನ ಬಂತು. ಗ್ರಾಮದಲ್ಲಿ ಭಾರಿ ಮಂಟಪ ಕಟ್ಟಿಸಿದರು. ಮಂಟಪದಮೇಲೆ ಆಕಾಶದಷ್ಟು ಅಗಲ ಚಪ್ಪರ ಹಾಕಿಸಿದರು. ಚಪ್ಪರಕ್ಕೆ ಅಂದವಾದ ವಿವಿಧ ಬಣ್ಣದ ಬಟ್ಟೆಗಳನ್ನು ಕಟ್ಟಿಸಿದರು. ತೋರಣ ಕಟ್ಟಿದರು. ಮುತ್ತಿನ ರಂಗವಲ್ಲಿ ಇಟ್ಟರು. ಸುಗಂಧ ಪರಿಮಳವನ್ನು ಚೆಲ್ಲಿದರು. ಮಂಟಪದಲ್ಲಿ ಒಂದು ಅಗ್ನಿ ಕುಂಡ ನಿರ್ಮಿಸಿದರು.

ಈ ಪರಿ ಅಲಂಕರಿಸಲ್ಪಟ್ಟ ಚಪ್ಪರ ಜನಗಳಿಂದಲೂ, ಅಮೂಲ್ಯವಸ್ತ್ರಾಭರಣಗಳನ್ನು ಧರಿಸಿದ ಮುತ್ತೈದೆಯರಿಂದಲೂ ತುಂಬಿ ಕಿಕ್ಕಿರಿಸಿತ್ತು. ಆ ದಿನ ವಾಸವಿಕನ್ಯೆ ಅಭ್ಯಂಜನ ಸ್ನಾನಮಾಡಿ, ಅರಸಿನ ಕುಂಕುಮ ಬಣ್ಣದ ಸೀರೆ ಧರಿಸಿದಳು. ಪೂರ್ತಿಶೃಂಗಾರದಿಂದ, ತಿಲಕವನ್ನು ಹಣೆಯಲ್ಲಿಟ್ಟುಕೊಂಡಳು. ಗಂಧ ಬಳಿದುಕೊಂಡಳು. ಬಾಜಾಬಜಂತ್ರಿಗಳು ಮೊಳಗುತ್ತಿರುವಾಗ ಆಕೆ ಮಂಟಪದ ಹತ್ತಿರ ಬಂದಳು.



ವಾಸವಾಂಬಿಕೆ ಮಾಡಿದ ಈ ಏರ್ಪಾಟುಗಳಿಗೆ ಎಲ್ಲರೂ ಆಶ್ಚರ್ಯಚಕಿತರಾದರೇನೋ ಹೌದು. ಆದರೆ ಯಾರೊಬ್ಬರಿಗೂ ಆಕೆಯ ಉದ್ದೇಶವೇನೋ ತಿಳಿಯದು. ಆಕೆಯ ತಂದೆ ತಾಯಿಗಳಿಗೇ ತಿಳಿಯದೆಂದಮೇಲೆ ಉಳಿದವರ ಮಾತೇನು?

ಇಷ್ಟರಲ್ಲಿ ರಾಜನು ಸಪರಿವಾರ ಸಮೇತನಾಗಿ ಪೆನುಕೊಂಡೆಗೆ ಬಿಜಯಮಾಡಿ, ಮದುವೆಯ ಮಂದಿರವನ್ನು ಪ್ರವೇಶಿಸಿದ. ಮಂಟಪವನ್ನು ಪ್ರವೇಶಿಸಿದಕೂಡಲೇ ಅಲ್ಲಿ ಸಿದ್ಧವಾಗಿದ್ದ ಏರ್ಪಾಟುಗಳನ್ನು ನೋಡಿ ಪರವಶನಾದ. ವಾಸವಿ ರಾಜನ ಬಳಿಸಾರಿ "ಮಹಾರಾಜರೇ, ಅಗ್ನಿಕುಂಡದ ಸುತ್ತಲೂ ವಧೂವರರು ಮೂರುಬಾರಿ ಪ್ರದಕ್ಷಿಣೆಯನ್ನು ಮಾಡಿ, ತರುವಾಯ ದೇವಾಲಯಕ್ಕೆಹೋಗಿ ವಿವಾಹ ಮಾಡಿಕೊಳ್ಳುವುದು ನಮ್ಮ ಕುಲದ

ಸಂಪ್ರದಾಯ" ಎಂದಳು. ರಾಜ "ಓ, ಸರಿ" ಎಂದು ಸಂತೋಷದಿಂದ ಒಪ್ಪಿಕೊಂಡ.

ವಾಸವಾಂಬ ತನ್ನ ಗುರುಗಳಿಗೆ, ತಂದೆ ತಾಯಿಗಳಿಗೆ, ಬಂಧು ಮಿತ್ರರಿಗೆ, ವಿಪ್ರರಿಗೆ ನಮಸ್ಕಾರ ಮಾಡಿದಳು. ರಾಜನಿಗೆ ದಾರಿ ತೋರುವಂತೆ ಹೇಳಿದಳು. ತಾನು ಆತನ ಹಿಂದೆ ಹೆಜ್ಜೆಯಿಡುತ್ತಿದ್ದಳು. ಕಿವಿಗಳು ಕಿವುಡಾಗುವಂತೆ ಬಾಜಾಬಜಂತ್ರಿಗಳು ಮೊಳಗುತ್ತಿರಲು ಅಗ್ನಿಕುಂಡದ ಸುತ್ತಲೂ ಅವರು ಪ್ರದಕ್ಷಿಣೆ ಮಾಡುತ್ತಿದ್ದರು. ಒಂದು ಪ್ರದಕ್ಷಿಣೆ ಆಯಿತು. ಎರಡನೇಯದೂ ಆಯಿತು. ಮೂರನೇ ಪ್ರದಕ್ಷಿಣೆಯಾದ ಕೂಡಲೇ ಧಗಧಗನೆಂದು ಉರಿಯುತ್ತಿದ್ದ ಆ ಅಗ್ನಿಜ್ವಾಲೆಯಲ್ಲಿ ವಾಸವಿ ಗಬಕ್ಕನೆ ಧುಮುಕಿ ಆತ್ಮಾರ್ಪಣೆ ಮಾಡಿದಳು. ಅಷ್ಟರಲ್ಲಿ ದೇವಿ ಬಂದು ತನ್ನ ಮುದ್ದು ಮಗಳನ್ನು ಎದೆಗೆ ಒತ್ತಿಕೊಂಡು ಅದೃಶ್ಯಳಾದಳು.

ಏನು ನಡೆಯುವುದೋ ಎಂದು ರೆಪ್ಪೆಬಡಿಯದೆ ಸಾವಿರ ಕಣ್ಣುಗಳಿಂದ ನೋಡುತ್ತಿದ್ದ ಜನರೆಲ್ಲಾ ಒಂದೇ ಸಾರಿ ಗೊಳೋ ಎಂದು ಅತ್ತರು. ವಾಸವಿ ತನ್ನ ಹಿಂದೆಯೇ ಬರುತ್ತಿರುವಳೆಂದು ಭ್ರಮೆಗೊಂಡಿದ್ದ ವಿಮಲಾದಿತ್ಯನು ಕೂಡಲೇ ಪಲಾಯನ ಮಾಡಿದ. ಪ್ರಾಣ ಉಳಿಸಿಕೊಳ್ಳಲು ಆತನೇನೋ ಓಡಿದ. ಆದರೆ ದೇವಿಯ ಶಾಪದಿಂದ ಆ ದುರುಳನು ದಾರಿಯಲ್ಲೇ ತಲೆಯೊಡೆದು ಪ್ರಾಣಬಿಟ್ಟ. ಪ್ರಾಣ ಸಮಾನವಾದ ತಮ್ಮ ವಾಸವಿಯನ್ನು ಸೇರಬೇಕೆಂಬ ಆತುರದಿಂದ ಕುಸುಮಶ್ರೇಷ್ಠಿ ಮತ್ತು ಆತನ ಮಡದಿ ಕುಸುಮಾಂಬ ಆ ಅಗ್ನಿಕುಂಡದಲ್ಲೇ ಹಾರಿ ಆಹುತಿಯಾದರು. ಇಷ್ಟು ನಡೆದ ಮೇಲೆ ನಾವಿದ್ದೇನು ಫಲ ಎಂದು ಕುಲಾಭಿಮಾನವುಳ್ಳ ಮಿಕ್ಕ 102 ಗೋತ್ರದ ವೈಶ್ಯರುಕೂಡ ವಾಸವಿ ಹೋದ ದಾರಿಯನ್ನೇ ಅನುಸರಿಸಿದರು.

ಈ ರೀತಿಯಾಗಿ ಕುಲಗೌರವಕ್ಕಾಗಿ ಆತ್ಮತ್ಯಾಗ ಮಾಡಿ ವಾಸವಿಕನ್ಯೆ ವೈಶ್ಯಕುಲಕ್ಕೆ ಕೀರ್ತಿತಂದಳು. ಅಂದಿನಿಂದ ಆಕೆ ವೈಶ್ಯರ ಕುಲದೇವತೆಯಾಗಿ 'ಶ್ರೀವಾಸವೀ ಕನ್ಯಕಾ ಪರಮೇಶ್ವರಿ' ಎಂಬ ಅಭಿಧಾನದಿಂದ ಆ ಮತಸ್ಥರಿಂದ ಬಹು ವೈಭವವಾಗಿ ಆರಾಧಿಸಲ್ಪಡುತ್ತಿರುವಳು.





# ಕೃಪಣ ಧರ್ಮಪ್ಪ

ಬಲಭದ್ರಪುರದಲ್ಲಿ ಧರ್ಮಪ್ಪನೆಂಬ ಒಬ್ಬ ವರ್ತಕನಿದ್ದನು. ಹೆಸರಿಗೆ ಧರ್ಮಪ್ಪನೇ ಹೊರತು ಆತನು ಕಡು ಲೋಭಿ. ಅವನ ಹೆಂಡತಿ ಧನಮ್ಮ ಮಾತ್ರ ಧಾರಾಳ ಗುಣವುಳ್ಳ ಪತಿವ್ರತೆ. ಅವರ ಮನೆಗೆ ಬಂದ ಭಿಕ್ಷುಕರಿಗೆ ಅಷ್ಟೋ ಇಷ್ಟೋ ಕೊಟ್ಟು ಕಳುಹಿಸುವಳು.

"ಬಂದವರಿಗೆಲ್ಲಾ ತಿರುಪೆ ಹಾಕುತ್ತಾ ಕುಳಿತರೆ ಖಜಾನೆ ಸಹ ದಿವಾಳಿಯಾಗುತ್ತೆ," ಎಂದು ಧರ್ಮಪ್ಪ ಹೆಂಡತಿಯನ್ನು ಗದರಿಸುವನು. "ಬಡ ಬಗ್ಗರಿಗೆ ಕೊಡುತ್ತಿದ್ದರೆ ನಮ್ಮಲ್ಲಿ ಸಂಪತ್ತು ವೃದ್ಧಿಯಾಗುತ್ತದೆ" ಎಂದು ಸಮಾಧಾನ ಹೇಳುವಳು ಧನಮ್ಮ. ಈ ರೀತಿ ಉಭಯರ ನಡುವೆ ಸಂಸಾರದಲ್ಲಿ ದಿನಾ ಜಗಳ ಜಂಜಾಟಗಳಾಗುತ್ತಿತು.

ಕೊನೆಗೆ ಹೇಗಾದರೇನು. ಆತನೊಂದು ಏರ್ಪಾಟಿಗೆ ಒಪ್ಪಿಕೊಂಡ. ಮನೆಗೆ ಬಂದ ಭಿಕ್ಷುಕರಿಗೆಲ್ಲಾ ಹಾಕದೆ, ದಿನಾ ಯಾರೋ ಒಬ್ಬನಿಗೆ ಮಾತ್ರ ಒಂದು ಬೊಗಸೆ ಅಕ್ಕಿ ಹಾಕಿ ಸುಮ್ಮನಿರಬೇಕು ಎಂದು. ಇಷ್ಟಾದರೂ ಒಪ್ಪಿಕೊಂಡಿದ್ದಕ್ಕೆ ಧನಮ್ಮ ಸಂತೋಷಗೊಂಡಳು. ಮರುದಿನ ಬೊಗಸೆ ತುಂಬಾ ಅಕ್ಕಿ ತೆಗೆದು ಅದೆಲ್ಲವನ್ನೂ ಒಬ್ಬ ಭಿಕ್ಷುಕನಿಗೇ ಹಾಕುವಳು. ಆ ಬೊಗಸೆ ಅಕ್ಕಿ ಅಳೆದರೆ ಒಂದು ಪಾವಿಗಿಂತಲೂ ಹೆಚ್ಚಾಗುತಿತ್ತು. 'ಹೋಗಲಿ, ಒಬ್ಬರಿಗಾದರೂ ಹೊಟ್ಟೆ ತುಂಬ ಇಡುವಂತೆ ಆಯಿತಲ್ಲಾ' ಎಂದು ಆಕೆ ಮನಸ್ಸಿನಲ್ಲಿ ಎಷ್ಟೊ ಸಂತೋಷಪಡುವಳು.

ಹೀಗೇ ಇರುವಲ್ಲಿ ಅವರ ಸೊಸೆ ರತ್ನಳು ಶ್ರಾವಣ ಮಾಸದ ನೇಮಕ್ಕೆ ಅತ್ತೆ ಮನೆಗೆ ಬಂದಳು. ಸೊಸೆಯನ್ನು ಕಂಡಕೂಡಲೇ ಧರ್ಮಪ್ಪನಿಗೆ ಒಂದು ವಿಚಿತ್ರವಾದ ಆಲೋಚನೆಯುಂಟಾಯಿತು. ಕೂಡಲೇ ಹೆಂಡತಿಯನ್ನು ಕರೆದು "ಲೆ, ಲೇ, ಇನ್ನುಮೇಲೆ ನಮ್ಮ ರತ್ನಳ ಕೈಯಿಂದ ತಿರುಕರಿಗೆ ಭಿಕ್ಷೆ ಹಾಕಿಸು. ಆ ಪುಟ್ಟ ಕೈಗಳಲ್ಲಿ ಹೊಸ ಸೊಸೆ ದಾನ ಧರ್ಮ ಮಾಡುತ್ತಿರುವಳೆಂದರೆ

ಡಿ. ಬಲರಾಮ.



ನೋಡಲು ಮುಚ್ಚಟೆಯಾಗಿಯೂ ಇರುತ್ತೆ, ಜನಾನೂ ಸಂತೋಷಪಡ್ತಾರೆ" ಎಂದ. ಯಾವುದೋ ಒಂದು ವಿಧದಲ್ಲಿ ಗಂಡನಿಗೆ ಔದಾರ್ಯಗುಣ ಬಂತಲ್ಲಾ ಎಂದು ಧನಮ್ಮ ಸಂತಸಗೊಂಡಳು. ಆದರೆ ಯಾಕೆ ಹೀಗೆ ಹೇಳಿದನೋ ತಿಳಿದು ಕೊಳ್ಳಬೇಕೆಂಬ ಬುದ್ಧಿ ಮಾತ್ರ ಅಕೆಗೆ ಹೊಳೆಯಲಿಲ್ಲ.

ಇಷ್ಟರಲ್ಲಿ ಧರ್ಮಪ್ಪ ಬೆಲ್ಲದ ವ್ಯಾಪಾರ ಮಾಡಲು ತುರ್ತಾಗಿ ಅನಕಾಪಲ್ಲಿಗೆ ಹೋಗಬೇಕಾಗಿ ಬಂತು. ಮಾವನ ಕೋರಿಕೆಯಂತೆ ಮರು ದಿನದಿಂದ ರತ್ನಳು ಭಿಕ್ಷುಕರಿಗೆ ಭಿಕ್ಷೆ ನೀಡುವಳು. ನೀಡುವುದೆಂದರೇನು ಅಷ್ಟೇ, ಇಷ್ಟೇ? ಚೀಲದಿಂದ ಅಕ್ಕಿ ತೆಗೆದು ಎಷ್ಟು ಜನ ಬಂದರೆ ಅಷ್ಟು ಜನಕ್ಕೂ ತನ್ನ ಪುಟ್ಟ ಕೈಗಳಿಂದ ಧರ್ಮ ಮಾಡುತ್ತಾ ಬಂದಳು.

'ಮತ್ತೆ ಧನಮ್ಮ ದಿನಾ ಒಬ್ಬರಿಗೆ ಮಾತ್ರ ಭಿಕ್ಷೆ ನೀಡುತ್ತಿದ್ದಳು, ಈಗ ರತ್ನ ಬಂದಷ್ಟು ಜನಕ್ಕೂ ಹಾಕುತ್ತಿರುವಳಲ್ಲಾ ಏಕೆ?' ಎಂಬ ಸಂಶಯ ನಿಮಗೆ ಬರಬಹುದು. ಇದಕ್ಕೊಂದು ಕಾರಣವೂ ಇತ್ತು. ಅಷ್ಟು ಬುದ್ಧಿವಂತನಾದ ಧರ್ಮಪ್ಪ ಒಂದೇ ಒಂದು ಸಣ್ಣ ವಿಷಯದಲ್ಲಿ ಮೋಸ ಹೋದ.

ಹೇಗೆಂದರೆ ಹೆಂಡತಿ ಧನಮ್ಮನ ಕೈಗಳು ದೊಡ್ಡವು. ಅಷ್ಟೇ ಅಲ್ಲದೆ ಅಕೆಯ ಕೈ ಧಾರಳ. ದಿನಕ್ಕೆ ಒಂದು ಬೊಗಸೆಯಷ್ಟೇ ಆದರೂ ಪಾವಿಗಿಂತಲೂ ಹೆಚ್ಚು ಅಕ್ಕಿ ಖರ್ಚಾಗುತ್ತಿದೆ. ಆದುದರಿಂದ ಈ ಕೆಲಸ ಆಕೆಯ ಕೈಯಿಂದ ತಪ್ಪಿಸಿದರೆ ಇನ್ನುಮುಂದೆ ದುಬಾರಿ ವೆಚ್ಚ ನಡೆಯುವುದಿಲ್ಲ ಎಂದು ಯೋಚಿಸಿದ. ಆದರೆ ಹೆಂಡತಿಯ ಕೈಯಿಂದ ಈ ಕೆಲಸ ಹೇಗೆ ಬದಲಾವಣೆ ಮಾಡುವುದು ಎಂಬ ಪ್ರಶ್ನೇ ಎದ್ದಿತು.

ಈಗ ಸೊಸೆ ಮನೆಯಲ್ಲಿ ಕಾಲಿಟ್ಟ ಕೂಡಲೇ ಧರ್ಮಪ್ಪನ ಸಮಸ್ಯೆಗೆ ಸಮಾಧಾನ ಸಿಕ್ಕಿತು. ಸೊಸೆಯ ಕೈಗಳು ಪುಟ್ಟಕೈಗಳು. ಆಕೆಯ ಕೈಯಿಂದ ಭಿಕ್ಷೆ ಹಾಕಿಸಿದರೆ ಆ ಬೊಗಸೆಯಲ್ಲಿ ಚಟಾಕು ಅಕ್ಕಿಯಾದರೂ ತುಂಬುವುದಿಲ್ಲ. ಆದರಿಂದ ಅಕ್ಕಿ ತುಂಬ ಖರ್ಚು ಆಗದು. ಈ ಆಲೋಚನೆಯಿಂದ ಈ ಕೆಲಸ ಸೊಸೆಗೆ ಒಪ್ಪಿಸಿದರೆ ಸೊಗುಸಾಗಿರುವುದೆಂದು ಸತಿಗೆ ಸಮಾಧಾನ ಹೇಳಿದ.

ಮಾಯಾಮರ್ಮವರಿಯದ ಧನಮ್ಮ ಈ ಬದಲಾವಣೆಗೆ ಕೂಡಲೇ ಒಪ್ಪಿಕೊಂಡಳು.

ತನ್ನ ಮಾತಿಗೆ ಆಕೆ ಒಪ್ಪಿದಳೆಂಬ ಸಂತೋಷಭರದಲ್ಲಿ ಧರ್ಮಪ್ಪ 'ದಿನಕ್ಕೆ ಒಬ್ಬನಿಗೇ ಭಿಕ್ಷ ಹಾಕಬೇಕು' ಎಂಬ ಷರತ್ತನ್ನು ಊರಿಗೆ ಹೋಗುವ ಮುನ್ನ ಹೇಳಲು ಮರೆತು ಬಿಟ್ಟ.

ಆತನು ಹೇಳದಿದ್ದರೆ ರತ್ನಳಿಗೆ ಹೇಗೆತಾನೇ ಗೊತ್ತಾಗಬೇಕು. ಆದ್ದರಿಂದ ಸೊಸೆ ಮನೆಗೆ ಬಂದ ಭಿಕ್ಷುಕರಿಗೆಲ್ಲಾ ತನ್ನ ಪುಟ್ಟ ಕೈಗಳಿಂದ ಅಕ್ಕಿ ಹಾಕುತ್ತಾ ಬಂದಳು. ಧರ್ಮಪ್ಪನ ಮನೆಯಲ್ಲಿ ಆದ ಬದಲಾವಣೆ ಕಂಡು ಊರಿನವರೇ ಅಲ್ಲದೆ, ನೆರೆಹೊರೆ ಗ್ರಾಮಗಳಿಂದಲೂ ಸಹ ಯಾಚಕರು ಬಂದು ಸಾಲಾಗಿ ಮನೆ ಮುಂದೆ ನಿಂತಿರುತ್ತಿದ್ದರು.

ಹತ್ತು ದಿನಗಳಲ್ಲಿ ಸರಕು ತುಂಬಿಕೊಂಡು ಧರ್ಮಪ್ಪ ಮನೆ ಸೇರಿದ. ಆತನು ಬರುವ ವೇಳೆಗೆ ಸಾಲಾಗಿ ನಿಂತಿದ್ದ ಯಾಚಕರು "ತಾಯಿ, ಅನ್ನಪೂರ್ಣೆ, ತಾಯಿ" ಎಂದು ಸೊಸೆಯನ್ನು ಹೊಗಳಿ, ಆಕೆಯ ಪುಟ್ಟ ಕೈಗಳಿಂದ ಅವರೆಲ್ಲಾ ಅಕ್ಕಿ ಪಡೆಯುತ್ತಿದ್ದರು.

ಇದನ್ನು ಕಂಡು ಕೃಪಣನಾದ ಧರ್ಮಪ್ಪನ ಎದೆ ಬಿರಿಯಿತು. ನೋಡಿವರೆ ತಾನು ಮನೆ ಖರ್ಚಿಗಾಗಿ ಕೊಟ್ಟುಹೋಗಿದ್ದ ಒಂದು ಚೀಲದ ಅಕ್ಕಿ ಬಹುಮಟ್ಟಿಗೆ ಧರ್ಮಕ್ಕೆ ವಿನಿಯೋಗವಾಗಿ, ಚೀಲ ಖಾಲಿಯಾಗಿದೆ.




ಈಗೇನೆಂದರೇನು ಲಾಭ? "ಭಿಕ್ಷೆ ಹಾಕುವ ಅಧಿಕಾರ ಸೊಸೆಗೆ ನಾನೇ ಒಪ್ಪಿಸಿದೆ. ಮತ್ತೆ ಬದಲಾಯಿಸಿದರೆ ನಾಲ್ಕು ಜನರಲ್ಲಿ ನಗೆಪಾಟಲಿಗೆ ಗುರಿಯಾಗಬೇಕಾದೀತು" ಎಂದು ಅಂದುಕೊಂಡ ಧರ್ಮಪ್ಪ. ರತ್ನಳ ಅಧಿಕಾರದಲ್ಲಿ ಅವರ ಮನೆಯಲ್ಲಿ ದಾನಧರ್ಮ [illegible] ಧಾರಾಳವಾಗಿ ನಡೆಯುತ್ತಿದ್ದುದ [illegible] ಧರ್ಮಾತ್ಮಳೆಂಬ ಕೀರ್ತಿ ಬ [illegible] ಸಾಮಾನು ಹೋದರೆ ಹೋ [illegible] ರಾದರೂ ಬರಲಿ ಎಂದರೆ ಸಾ [illegible] ಹೆಸರು ಆಕೆಯದು ಆಯಿತಲ್ಲಾ [illegible] ಧರ್ಮಪ್ಪ ವ್ಯಾಕುಲಗೊಂಡ. ಗಂ [illegible] ತಕ್ಕ ಶಾಸ್ತಿ ಆಯಿತೆಂದು ಧನಮ್ಮ ಸಂತೋಷ [illegible] ಗೊಂಡಳು.




## ಕುಶಾಗ್ರಮತಿ

ಒಬ್ಬ ಮಹಾರಾಜನ ಹತ್ತಿರ ಉದಾರಗುಣವುಳ್ಳ ಮಂತ್ರಿ ಒಬ್ಬನಿದ್ದ. ಆತನು ಮಹಾ ಅನ್ನದಾತ. ದೇಶದೇಶಗಳಿಂದ ಬ್ರಾಹ್ಮಣರು ಬಂದು ಆತನ ಪಂಗ್ತಿಯಲ್ಲಿ ದಿನಾ ಊಟಮಾಡುತ್ತಿದ್ದರು. ಬಂದವರು ಯಾರು? ಹೋದವರು ಯಾರು? ಯಾರೆಷ್ಟು ದಿನಗಳಿಂದ ತನ್ನ ಮನೆಯಲ್ಲಿರುವರು? ಈ ವಿಷಯಗಳನ್ನೆಲ್ಲಾ ಮಂತ್ರಿ ಎಂದೂ ಲೆಕ್ಕ ಮಾಡಿದ್ದೇ ಇಲ್ಲ.

ಒಂದು ದಿನ ಒಬ್ಬ ಬ್ರಾಹ್ಮಣ ಎರಡು ...ತ್ತೂ ಊಟಕ್ಕಿದ್ದುಬಿಟ್ಟದ್ದುದರಿಂದ ... ಕಣ್ಣಿಗೆ ಬೀಳುವ ಅವಕಾಶವೂ ... ಮಂತ್ರಿ "ಸ್ವಾಮಿ ತಮ್ಮದು ...?" ಎಂದು ಕೇಳಿದ. ಅದಕ್ಕೆ ... ತಿಳಿಯದೇ ನಿಮಗೆ? ನಾನು ...ಮ್ಮನ ಮಗನಲ್ಲವೇ?" ಎಂದು ...ಪ್ರಶ್ನೆ ಹಾಕಿದ.

ಮಂತ್ರಿ ಆಶ್ಚರ್ಯಹೊಂದಿ "ನಮ್ಮ ತಾಯಿಗೆ ಅಕ್ಕಂದಿರೇ ಇಲ್ಲವಲ್ಲಾ, ಈ ಸಂಬಂಧ ಹೇಗೆ ಬಂತು" ಎಂದು ಕೊಂಡು ತನ್ನಲ್ಲಿತಾನು ಜಿಜ್ಞಾಸೆ ಪಡುತ್ತಿದ್ದ. ಆಗ ಬ್ರಾಹ್ಮಣ "ಅದೇನದು ಹಾಗೆ ವಿಸ್ಮಯ ಪಡುತ್ತಿರುವಿರಿ? ಮಂತ್ರಿ ಪದವಿ ಬಂದ ಕೂಡಲೇ ನೆಂಟಸ್ತಿಕೆ ಸಹಾ ಮರೆಯುವುದು ನ್ಯಾಯವೇ? ಸರಿ, ನಿಮಗೆ ಜ್ಞಾಪಕ ಮಾಡ್ತೇನೆ ಇರಿ. ನಮ್ಮ ತಾಯಿ ನಿಮ್ಮ ತಾಯಿ ಅಕ್ಕ ತಂಗಿಯರು. ಹಿರಿಯವಳಾದ ಸರಸ್ವತಿದೇವಿಯ ಮಗ ನಾನು, ಆಕೆಯ ತಂಗಿಯಾದ ಲಕ್ಷ್ಮೀದೇವಿಯ ಪುತ್ರರು ನೀವು. ನಿಮ್ಮ ತಾಯಿ ಲಕ್ಷಣಗಳು ನಿಮಗೂ, ನಮ್ಮ ತಾಯಿ ಲಕ್ಷಣಗಳು ನನಗೂ ಬಂತು. ಬೇರೆ ಬೇರೆಯಾಗಿ ಜನಿಸಿರುವೆವಾದರೂ ಉಭಯರೂ ಒಂದೇ ಕುಟುಂಬಕ್ಕೆ ಸೇರಿದವರಲ್ಲವೇ? ಅಣ್ಣತಮ್ಮಂದಿರಾದುದರಿಂದ ನನಗೆ ಯಾವುದಾದರೂ ಉಪಕಾರ ಮಾಡಿ ಮತ್ತೆ" ಎಂದು ತನ್ನ ಸ್ಥಿತಿಗತಿಗಳನ್ನು ತಿಳಿಸಲು, ಬ್ರಾಹ್ಮಣನ ಚತುರೋಕ್ತಿಗೆ ಮೆಚ್ಚಿ, ಮಂತ್ರಿ ಆತನಿಗೆ ಒಳ್ಳೇ ಉದ್ಯೋಗವನ್ನು ಕೊಡಿಸಿಕೊಟ್ಟ. ಅಂದಿನಿಂದ ಬ್ರಾಹ್ಮಣ ಸುಖವಾಗಿದ್ದಾನೆ.

ಒಬ್ಬ ಭಾರಿ ವರ್ತಕನಿದ್ದ. ಆತನು ವ್ಯಾಪಾರ ಮಾಡಲು ಹೋಗುವ ಮೊದಲು ಮನೆಯಲ್ಲಿ ಎಲ್ಲರನ್ನೂ ಕುರಿತು "ನಾನು ವಿದೇಶಕ್ಕೆ ಹೋಗುತ್ತಿದ್ದೇನೆ. ನಿಮಗೇನೇನು ಬೇಕು" ಎಂದು ಕೇಳಿದ. ಹಾಗೇ ಎಲ್ಲರ ಕೋರಿಕೆಗಳನ್ನು ತಿಳಿದುಕೊಂಡ. ತರುವಾಯ ತಾನು ಹೊಸದಾಗಿ ಬೆಳೆಸುತ್ತಿರುವ ಮುದ್ದುಗಿಣಿಯ ಹತ್ತಿರ ಹೋಗಿ ಅದನ್ನೂ ಸಹ ಕೇಳಿದ. ಆಗ ಗಿಣಿ "ಆದಿನ ನೀನುನನ್ನನ್ನು ಹಿಡಿದು ತಂದ ಅಡವಿಯಲ್ಲಿ ಒಂದು ದೊಡ್ಡ ಅರಳೀಮರವಿದೆ. ಆ ಗಿಡದಮೇಲೆ ಇನ್ನೂ ಬೇಕಾದಷ್ಟು ಗಿಣಿಗಳಿವೆ. ನೀನು ಹೋಗಿ ಅವುಗಳೊಂದಿಗೆ "ನಿಮ್ಮಂಥಹುದೇ ಗಿಣಿ ನನ್ನ ಹತ್ತಿರಲೂ ಇದೆ. ಅದು ಈಮಾತು ನಿಮ್ಮೊಂದಿಗೆ ಹೇಳಿಬರುವಂತೆ ತಿಳಿಸಿತು" ಎಂದು ಹೇಳಿ, ಅವು ಕೊಡುವ ಉತ್ತರವನ್ನು ನನ್ನೊಂದಿಗೆ ಬಂದು ಹೇಳು. ಇದೇ ನನಗೆ ಬೇಕಾದ ಉಪಕಾರ" ಎಂದಿತು.

ಮರುದಿನ ವರ್ತಕನು ಪ್ರಯಾಣ ಬೆಳೆಸಿದ. ಆರು ತಿಂಗಳಿಗೆ ಆತನ ವ್ಯಾಪಾರ ಮುಗಿಯಿತು. ತರುವಾಯ ಗಿಣಿ ಹೇಳಿದ ಅರಳೀಮರದ ಹತ್ತಿರ ಹೋಗಿ ಅಲ್ಲಿದ್ದ ಗಿಣಿಗಳೊಂದಿಗೆ "ಎಲೈ ಗಿಣಿಗಳೇ, ನಿಮ್ಮಂತಹದೇ ಗಿಣಿ ನನ್ನ ಹತ್ತಿರ ಸಹ ಒಂದಿದೆ. ಅದು ಈ ಮಾತು ನಿಮಗೆ ಹೇಳುವಂತೆ ತಿಳಿಸಿತು" ಎಂದ. ಇದನ್ನು ಕೇಳಿದೊಡನೆ ಒಂದು ಗಿಣಿ ರಪರಪನೆ ತನ್ನ ರೆಕ್ಕೆ ಬಡಿಯುತ್ತಾ ಕೆಳಗೆ ಬಿದ್ದು ಸತ್ತುಹೋಯಿತು. ಮಿಕ್ಕವೆಲ್ಲಾ ಯಾವ ಉತ್ತರವೂ ಕೊಡದೆ ಹಾರಿಹೋದವು. ವರ್ತಕನು ಮನೆಸೇರಿ ಅಡವಿಯಲ್ಲಿ ಗಿಣಿ ಸತ್ತ ಸುದ್ದಿ ತಿಳಿಸಿದ.

ಕೂಡಲೇ ಆ ಗಿಣಿ ಸಹ ವಿಲವಿಲ ಒದ್ದಾಡಿ ಆ ಪಂಜರದಲ್ಲೇ ಪ್ರಾಣ ಬಿಟ್ಟಿತು. "ಅಯ್ಯೋ" ಎಂದುಕೊಂಡು, ಆತನು ಪಂಜರದ ಬಾಗಿಲನ್ನು ತೆರೆದು ಗಿಣಿಯನ್ನು ಹೊರಗೆ ಹಾಕಿದ. ಕೂಡಲೇ ಆ ಗಿಣಿ ರಿವ್ವನೆ ಹಾರಿ ಒಂದು ರೆಂಬೆಯಮೇಲೆ ಕುಳಿತು "ಎಲೈ ವರ್ತಕನೇ! ಸ್ವೇಚ್ಛೆಗಾಗಿ, ನಾನು ನಿನ್ನ ಹತ್ತಿರವಿರುವ ವಿಷಯವನ್ನು ಸಂಜ್ಞೆಯಿಂದ ನನ್ನ ಕುಲಾಭಿಮಾನಿಗಳಿಗೆ ತಿಳಿಸಿದೆ. ಅವರು ನನ್ನ ಮಾತನ್ನು ಕೇಳಿ ಅರ್ಥ ಮಾಡಿಕೊಂಡು, ನಿನ್ನಿಂದ ನನ್ನ ಬಿಡುಗಡೆಗೆ ಈ ರೀತಿ ದಾರಿ ತೋರಿಸಿದರು" ಎಂದು ಹೇಳಿ ಅದು ಹಾರಿ ಹೋಯಿತು. ವರ್ತಕ ಬೆಕ್ಕಸಬೆರಗಾದ.





# ಏಕನಾಥ

ಮಹಾರಾಷ್ಟ್ರ ದೇಶದಲ್ಲಿ ಪೈಠಣಪುರವೆಂಬ ಗ್ರಾಮವಿದೆ. ಆ ಊರಿನಲ್ಲಿ ಏಕನಾಥನೆಂಬ ಬಾಲಕನಿದ್ದ. ಆ ಗ್ರಾಮಕ್ಕೆ ಸಮೀಪದಲ್ಲಿಯೇ ಜಗನ್ನಾಥನೆಂಬ ಮಹಾ ಪಂಡಿತನೊಬ್ಬನಿದ್ದ. ಆತನ ಹತ್ತಿರ ವಿದ್ಯಾರ್ಜನೆಗಾಗಿ ದೂರ ದೇಶಗಳಿಂದಲೂ ಸಹ ಎಷ್ಟೋ ಶಿಷ್ಯರು ಬರುತ್ತಿದ್ದರು.

ಏಕನಾಥನೂ ಸಹ ಹೋಗಿ "ಸ್ವಾಮಿ, ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ನನಗೆ ತಾರಕ ಮಂತ್ರ ಉಪದೇಶಮಾಡಿ" ಎಂದು ಪ್ರಾರ್ಥಿಸಿದ. ಆ ಬಾಲಕನನ್ನು ನೋಡಿ ಜಗನ್ನಾಥ ಪಂಡಿತನು "ಮಗೂ, ನೀನಿನ್ನೂ ತುಂಬಾ ಚಿಕ್ಕವನು. ಹೋಗು— ದೊಡ್ಡವನಾದಮೇಲೆ ಬರುವೆಯಂತೆ" ಎಂದ. ಏಕನಾಥನು ಅಲ್ಲಿಂದ ಕದಲಲಿಲ್ಲ. "ಸ್ವಾಮಿ ವಯಸ್ಸಿನಲ್ಲೇನಿದೆ? ಧ್ರುವನು ಚಿಕ್ಕವನೇ ಅಲ್ಲವೇ? ಆತನನ್ನು ಶ್ರೀಮಹಾವಿಷ್ಣು ಅನುಗ್ರಹಿಸಲಿಲ್ಲವೇ? ಅದರಂತೆ ನೀವೂ ಸಹ ನನ್ನ ಮೇಲೆ ಕೃಪೆತೋರಿ" ಎಂದು ಬೇಡಿಕೊಂಡ. ಮತ್ತೇನೂ ಮಾಡಲಾರದೆ ಜಗನ್ನಾಥ ಪಂಡಿತನು "ಹಾಗಾದರೆ ಸರಿ, ಶ್ರದ್ಧಾ ದೀಕ್ಷೆ ಕುದುರಿದವರಿಗೆ ಅಲ್ಲದೆ ತಾರಕ ಮಂತ್ರ ಉಪದೇಶ ಮಾಡಲು ಅವಕಾಶವಿಲ್ಲ. ನಿನಗೆ ಅಂಥ ದೀಕ್ಷೆ ಕುದುರಿತೆಂದು ನನಗೆ ತಿಳಿದಾಗ ಆ ಮಂತ್ರವನ್ನು ಉಪದೇಶ ಮಾಡುವೆನು. ಅವರೆವಿಗೂ ನೀನು ಇದರ ಪ್ರಸ್ತಾಪ ತೆಗೆಯಬೇಡ" ಎಂದ. "ಮಹಾಪ್ರಸಾದ" ಎಂದ ಏಕನಾಥ.

ಗುರುಗಳ ಮನೆಯಲ್ಲಿ ಶಿಷ್ಯರು ತಲಾ ಒಂದೊಂದು ಕೆಲಸ ಮಾಡುತ್ತಿದ್ದರು. ಏಕನಾಥನೊಂದಿಗೆ ಪಂಡಿತನು "ಅಪ್ಪಾ, ಶರೀರ ಕಷ್ಟ ಸಲ್ಲಿಸುವ ಶಕ್ತಿಯಿಲ್ಲ ನಿನಗೆ. ಆದ್ದರಿಂದ ಒಂದೆಡೆ ಕುಳಿತು ನಮ್ಮ ಮನೆಯ ಜಮಾ ಖರ್ಚುಗಳ ಲೆಕ್ಕ ಬರೆಯುತ್ತಿರು" ಎಂದು ಹೇಳಿದ. ಏಕನಾಥನು ಶ್ರದ್ಧೆಯಿಂದ ಲೆಕ್ಕ ನೋಡಿಕೊಳ್ಳುತ್ತಿದ್ದ.

ವರ್ಷಗಳು ಗತಿಸಿದವು. ಏಕನಾಥ ದಿನಾ ಜಮಾ ಖರ್ಚು ಬರೆಯುತ್ತಲೇ ಇದ್ದ. ಒಂದು

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು

ಸಾರಿ ಹಿಂದು ಮೂರು ಕಾಸು ಹೆಚ್ಚು ಕಡಿಮೆ ಬಂತು. "ಈ ಮೂರು ಕಾಸು ಹೇಗೆ ಖರ್ಚಾಗಯಿತು" ಎಂದು ಆತ ಬಹಳ ಹೊತ್ತು ಆಲೋಚಿಸಿದ, ಆದರೆ ಆತನಿಗೆ ಅದರ ಸುಳಿವುತಿಳಿಯಲಿಲ್ಲ. ರಾತ್ರಿ ಎಂಟು ಗಂಟೆ ಆಯಿತು; ಅತಿಥಿಗಳ ಊಟ ಮುಗಿಯಿತು. ಒಂಬತ್ತಾಯಿತು; ಶಿಷ್ಯಕೋಟಿಯ ಊಟ ಸಹ ಮುಗಿಯಿತು. ಹತ್ತು ಹೊಡೆಯಿತು; ಮುಸುಕೆಳೆದು ಎಲ್ಲಾ ಮಲಗಿಕೊಂಡರು. ಆದರೆ ಆ ಮೂರು ಕಾಸಿಗಾಗಿ ಏಕನಾಥನು ಇನ್ನೂ ಲೆಕ್ಕದ ಪುಸ್ತಕವನ್ನು ತಿರುವಿ ಹಾಕುತ್ತಲೇ ಇದ್ದ.



ರಾತ್ರಿ ಹನ್ನೆರಡು ಗಂಟೆ ಆಯಿತು. ಏನೋ ಶಬ್ದವಾಗಿ ಜಗನ್ನಾಥ ಪಂಡಿತನಿಗೆ ಎಚ್ಚರವಾಯಿತು. ನೋಡಿದರೆ ಕಂದೀಲಿನ ಮುಂದೆ ಲೆಕ್ಕ ತಿರುವಿ ಹಾಕುತ್ತಿದ್ದ ಏಕನಾಥ ಕಾಣಿಸಿದ. ಭೋಜನ ಸಮಯದಲ್ಲಿ ಆತನು ಪಂಗ್ತಿಯಲ್ಲಿ ಕಾಣಿಸದ ವಿಷಯ ಜಗನ್ನಾಥನಿಗೆ ಜ್ಞಾಪಕಕ್ಕೆ ಬಂತು. ಹೋಗಿ ಆತನ ಪಕ್ಕದಲ್ಲೇನಿಂತ. ಗುರುಗಳು ತನ್ನ ಪಕ್ಕದಲ್ಲಿರುವರೆಂಬ ವಿಷಯ ತಿಳಿಯದು ಏಕನಾಥನಿಗೆ. ಮತ್ತೊಂದು ಗಂಟೆ ಕಳೆಯಿತು. ಇದ್ದಕ್ಕಿದ್ದಂತೆಯೇ ಆತನು "ಹಾಂ. ಸಿಕ್ಕಿದ ಕಳ್ಳ" ಎಂದು ನೆಗೆದು ಕುಣಿದಾಡಿದ. ಆಗ ಪಕ್ಕದಲ್ಲಿದ್ದ ಗುರುಗಳ ಕೈ ತಗುಲಿ ಆತನು ಗಾಬರಿಗೊಂಡು "ಸ್ವಾಮಿ, ಬಂದು ಎಷ್ಟು ಹೊತ್ತಾಯಿತು?" ಎಂದು ಕೇಳಿದ. ಅದಕ್ಕೆ ಗುರುಗಳು "ಇಷ್ಟು ದೀಕ್ಷೆಯಿಂದ ನೀನು ಹುಡುಕುತ್ತಿದ್ದುದಾದರೂ ಏನು?" ಎಂದರು.

ಏಕನಾಥನು "ಒಂದು ಮೂರು ಕಾಸು ಸ್ವಾಮಿ. ಇಂದು ನಮ್ಮ ಗೃಹಕ್ಕೆ ಅತಿಥಿಯಾಗಿ ಬಂದ ಹರನಾಥಭಟ್ಟಾಚಾರ್ಯನಿಗೆ ಬೇಕೆಂದು ಶಿಷ್ಯನೊಬ್ಬನು ಬಂದು ಮೂರು ಕಾಸು ಕೇಳಿ ತೆಗೆದುಕೊಂಡು ಹೋದ. ಅದನ್ನು ಖರ್ಚಿಗೆ ಬರೆಯುವುದನ್ನು ಮರೆತು ಬಿಟ್ಟಿದ್ದೆ. ಈಗ ಜ್ಞಾಪಕ ಬಂತು. ಕೃತಾರ್ಥನಾದೆ" ಎಂದ.

ಗುರುಗಳ ಮನಕರಗಿ "ಅಪ್ಪಾ, ಆ ಮೂರು ಕಾಸಿಗಾಗಿ ನಿದ್ರಾಹಾರಗಳನ್ನು ತೊರೆದು ಕುಳಿತಿರುವೆಯಾ?" ಎಂದನು.

"ಸ್ವಾಮಿ, ನಿದ್ರಾಹಾರಗಳನ್ನು ನೋಡಿಕೊಳ್ಳುತ್ತಾ ಕುಳಿತಿದ್ದರೆ ಯಾವ ಕೆಲಸವನ್ನು



ಸಾಧಿಸ ಬಲ್ಲೆವು?'' ಎಂದು, ಆತನು ಗುರುಗಳ ಪಾದಗಳಿಗೆರಗಿ ತನ್ನ ಕೋಣೆಗೆ ಹೊರಟು ಹೋದ.

ಜಗನ್ನಾಥ ಪಂಡಿತನಿಗೆ ಆ ಕ್ಷಣವೇ ಒಂದು ಸಂಕಲ್ಪವುಂಟಾಯಿತು. "ಮೂರು ಕಾಸು ಹುಡುಕಲು ಇಷ್ಟೊಂದು ದೀಕ್ಷೆ ವಹಿಸಿದ ನೀತ. ಭಗವಂತನನ್ನು ಹುಡುಕಲು ಈ ಮಹಾ ದೀಕ್ಷೆ ವಿನಿಯೋಗಿಸಿದರೆ ಅದು ಸದ್ವಿನಿಯೋಗವಾಗುವುದು. ಆದ್ದರಿಂದ ಈತನು ಇನ್ನುಮುಂದೆ ಜಮಾ ಖರ್ಚು ನೋಡಿಕೊಳ್ಳುತ್ತಾ ಕಾಲಕಳೆಯಕೂಡದು" ಎಂಬ ನಿರ್ಧಾರಕ್ಕೆ ಬಂದನು.

ಏಕನಾಥನನ್ನು ಏಕಾಂತದಲ್ಲಿ ಕರೆದು "ಅಯ್ಯಾ, ಇಂದು ನಮ್ಮ ಮನೆಗೆ ಅತಿಥಿಯಾಗಿ ಒಬ್ಬ ಚಂಡಾಲನು ನಾಲ್ಕು ನಾಯಿಗಳನ್ನು ಸಂಗಡ ಕರೆದುಕೊಂಡು ಬರುವನು. ಆತನಿಗೆ ಉಚಿತರೀತಿಯಲ್ಲಿ ನೀನು ಪರಿಚಾರಿಕೆ ಮಾಡಿ. ಆತನ ಹೃದಯವನ್ನು ವಶಪಡಿಸಿಕೊಂಡೆಯೋ ಆತನೇ ನಿನಗೆ ತಾರಕ ಮಂತ್ರ ಉಪದೇಶ ಮಾಡುವನು. "ಚಂಡಾಲನೆಂದರೇನು? ತಾರಕ ಮಂತ್ರ ಉಪದೇಶಿಸುವುದೆಂದರೇನು?" ಎಂದು ಸಂದೇಹ ಬೀಳಬೇಡ. ಆ ಮಹಾನುಭಾವನೇ ನನ್ನ ಗುರುವಾದ ದತ್ತಾತ್ರೇಯ ಸ್ವಾಮಿ. ಅವರೊಂದಿಗೆ ಬರುವ ನಾಲ್ಕು ನಾಯಿಗಳು ನಾಲ್ಕು ವೇದಗಳು. ಆತನನ್ನು ಗುರುವಾಗಿ ಸ್ವೀಕರಿಸಿ ಉಪದೇಶ ಹೊಂದಿ ಮುಕ್ತಿ ಪಡೆ" ಎಂದ.

ಅದಕ್ಕೆ ಏಕನಾಥನು "ಸ್ವಾಮಿ, ನಿಮ್ಮ ಪಾದಗಳನ್ನು ಆಶ್ರಯಿಸಿದ ನನ್ನ ಮನಸ್ಸು ಅನ್ಯರನ್ನು ಆಶ್ರಯಿಸುವುದಿಲ್ಲ. ನನಗೆ ಅರ್ಹತೆಯುಂಟಾಯಿತೆಂದು ನಿಮಗೆ ತೋರಿದ ದಿನ ಆ ಮಂತ್ರವನ್ನು ತಾವೇ ಉಪದೇಶ ಮಾಡಿ" ಎಂದು ವಿನಯಪೂರ್ವಕವಾಗಿ ಪ್ರಾರ್ಥಿಸಿದ.

ದತ್ತಾತ್ರೇಯ ಸ್ವಾಮಿ ಬಿಜಯಮಾಡಲು ಜಗನ್ನಾಥಸ್ವಾಮಿ ಆತನಿಗೆ ಉಪಚಾರಮಾಡಿ ಏಕನಾಥನು ತನ್ನೊಂದಿಗೆ ಆಡಿದ ಮಾತುಗಳನ್ನು ಹೇಳಲು ದತ್ತಾತ್ರೇಯಸ್ವಾಮಿ "ಜಗನ್ನಾಥ, ನಿನ್ನ ಶಿಷ್ಯನು ಅನ್ಯ ಗುರುಗಳನ್ನು ಸ್ವೀಕರಿಸಲು ಒಪ್ಪಿಕೊಳ್ಳದಿರುವುದು ಸಹಜವೇ ಸರಿ. ಆದರೂ ನಿನಗೆ ಚಿಂತೆಯಾಕೆ, ಮರದ ಬುಡದಲ್ಲಿ ಎರೆದ ನೀರು

ಮರಕ್ಕೆ, ಕೊಂಬೆಗಳಿಗೂ, ಎಲೆಗಳಿಗೂ ಸೇರಿದಂತೆ ಏಕನಾಥನು ನಿನಗೆ ಮಾಡಿದ ಸೇವೆ ನನಗೆ ಸೇರುತ್ತದೆ. ಆತನು ನನ್ನ ಕರುಣೆಗೆ ಪಾತ್ರನಾಗುವನು. ಆದ್ದರಿಂದ ನೀನೇ ಆತನಿಗೆ ತಾರಕ ಮಂತ್ರ ಉಪದೇಶ ಮಾಡು, ಅದರಿಂದ ಆತನು ರಾಮ ಭಕ್ತನಾಗುವನು. ಕವಿತ್ವ ಪ್ರಾಪ್ತವಾಗುವುದು. ಆ ಕವಿತಾ ಶಕ್ತಿಯನ್ನು ಉಪಯೋಗಿಸಿ ಮಹಾರಾಷ್ಟ್ರ ಭಾಷೆಯಲ್ಲಿ ವಾಲ್ಮೀಕಿ ರಾಮಾಯಣ ರಚಿಸುವಂತೆ ಆತನಿಗೆ ಆಜ್ಞಾಪಿಸು. ಈ ರೀತಿ ಲೋಕಕ್ಕೆ ಉಪಕಾರವಾಗುವುದು" ಎಂದು ಹೇಳಿ ಅದೃಶ್ಯನಾದ.

ಏಕನಾಥನ ಬಯಕೆ ಈಡೇರಿತು. ಜಗನ್ನಾಥ ಪಂಡಿತನು ಆತನಿಗೆ ತಾರಕ ಮಂತ್ರವನ್ನು ಉಪದೇಶ ಮಾಡಿ "ಅಪ್ಪಾ, ನೀನಿನ್ನು ಪೈಠಾಣಪುರಕ್ಕೆ ಹೋಗು. ವೃದ್ಧರಾದ ನಿನ್ನ ತಂದೆ ತಾಯಿಗಳನ್ನು ಸೇವಿಸಿ, ರಾಮಾಯಣ ಮಹಾಕಾವ್ಯವನ್ನು ಮಹಾರಾಷ್ಟ್ರ ಭಾಷೆಯಲ್ಲಿ ರಚಿಸು" ಎಂದು ಆಜ್ಞಾಪಿಸಿದ.

ಗುರುವಾಜ್ಞೆಯ ಪ್ರಕಾರ ಏಕನಾಥನು ಪೈಠಾಣಪುರಕ್ಕೆ ಹೋಗಿ ರಾಮಾಯಣ ಬರೆಯಲು ಪ್ರಾರಂಭಿಸಿದ. ಪ್ರಾರಂಭಿಸುವುದೇನು ಬಂತು. ರಾಮಾಯಣ ಕಥೆಯಲ್ಲಿ ಲೀನವಾಗಿಬಿಟ್ಟ. ಸೀತಾ ರಾಮ ಲಕ್ಷ್ಮಣರನ್ನು ಅರಣ್ಯಕ್ಕೆ ಕಳುಹಿಸುವಾಗ ಅಯೋಧ್ಯಾಪುರ ಜನರೊಂದಿಗೆ ಆತನೂ ಅತ್ತನು. ಅಡವಿಯಲ್ಲಿ ಸೀತಾರಾಮರಿಗಾಗಿ ಲಕ್ಷ್ಮಣಸ್ವಾಮಿ




ಯೊಂದಿಗೆ ಆತನೂ ಕಂದಮೂಲಾದಿಗಳನ್ನು ಹುಡುಕಿದ. ಸೀತೆಯನ್ನು ಎತ್ತಿಕೊಂಡು ಹೋಗುತ್ತಿದ್ದರೆ ಅಡ್ಡಿ ಮಾಡಿದ ಜಟಾಯುವಿನೊಂದಿಗೆ ಆತನೂ ರಾವಣಾಸುರನಿಗೆ ಅಡ್ಡಿ ಹಾಕಿದ. ಈ ರೀತಿ ಮಗ್ನನಾಗಿಬಿಟ್ಟ.

ಹೀಗೆ ರಾಮಾಯಣ ಬರೆಯುತ್ತಿದ್ದ ಏಕನಾಥನಮೇಲೆ ಆಕ್ರೋಶದಿಂದ ಪೈಠಣಪುರದ ನಿವಾಸಿಗಳು ಹೇಗಾದರೂ ಆತನನ್ನು ಹೊರಗೆ ಬರಮಾಡಿ ಗೋಳಾಡಿಸಬೇಕೆಂದು ನಿಶ್ಚಯಿಸಿದರು. ಬಾಗಿಲು ಬಡಿದು ಶಬ್ದ ಮಾಡಿದರು. ಆದರೆ ಹಿತ್ತಲಲ್ಲಿ ಕುಳಿತು ಬರೆದುಕೊಳ್ಳುತ್ತಿದ್ದ ಏಕನಾಥನಿಗೇನೂ ಕೇಳಿಸಲಿಲ್ಲ. ಮನೆಯೊಳಕ್ಕೆ ಕಲ್ಲುಗಳನ್ನೆಸೆದರು. ಪಾಪಸಕಳ್ಳಿ ತಂದು ಬಿಸಾಡಿದರು. ಸಮಾಧಿಯಲ್ಲಿರುವ ಮಹಾ ಯೋಗಿಯಂತೆ ರಚನಾದೀಕ್ಷೆಯಲ್ಲಿದ್ದ

ಆ ಮಹಾಕವಿಗೆ ಇರುವೆ ಕಡಿದಷ್ಟಾದರೂ ನೋವು ಆಗಲಿಲ್ಲ. ಬೇಸರವಾಗಿ ಅವರು ಇನ್ನೇನು ಹೊರಡೋಣವೆಂದಿರಲು ಪೌಳಿಯ ಮೇಲಿಂದ ತಾಳೆಮರದಷ್ಟು ಎತ್ತರದಿಂದ ಹಾರಿ ಬಂದು ಏಕನಾಥ ಅವರಮೇಲೆ ಬಿದ್ದನು. 'ಅರೆ, ಇದೇನಿದು' ಎಂದು ಅವರು ಹೆದರಿದರು. ಅಷ್ಟು ಎತ್ತರದಿಂದ ಬಿದ್ದ ನಾದುದರಿಂದ ಏಕನಾಥನಿಗೆ ಏಟುಗಳು ಬಿದ್ದು ಮೂರ್ಛೆ ಬಂತು.

ಹೇಗಾದರೂ ಆತನನ್ನು ಗೋಳಾಡಿಸ ಬೇಕೆಂದು ಬಂದಿದ್ದವರೆಲ್ಲಾ ತಮ್ಮ ಆಕ್ರೋಶ ಮರೆತು ಏಕನಾಥನಿಗೆ ಸೇವೆಮಾಡಿದರು. ಆತನಿಗೆ ಪ್ರಜ್ಞೆ ಬಂದಮೇಲೆ "ಏನು ಸ್ವಾಮಿ, ಹೀಗೇಕೆ ಹಾರಿ ಬಂದಿರಿ?" ಎಂದು ಪ್ರಶ್ನೆ ಮಾಡಿದರು. ಏಕನಾಥನು ಆಶ್ಚರ್ಯಗೊಂಡು "ಏನು? ನಾನು ಹಾರಿ ಬಂದೆನೇ. ಹನುಮಂತನಲ್ಲವೇ? ಸಮುದ್ರ ದಾಟಿ ಈಗ ಲಂಕೆಯನ್ನು ಪ್ರವೇಶಿಸಿದ ಹನುಮಂತ" ಎಂದು ಎಡಗೈಯಲ್ಲಿ ತಾಳೆ ಪತ್ರವನ್ನೂ ಬಲಗೈಯಲ್ಲಿದ್ದ ಘಂಟಾದೊಂದಿಗೆ ತೋರಿಸಿದ.

ಅದರಲ್ಲೇನಿದೆ? ಹನುಮಂತನು ಸೀತೆಯನ್ನು ಹುಡುಕಲೆಂದು ಸಮುದ್ರವನ್ನು ಹೇಗೆ ದಾಟಿದನೋ ಆ ಘಟನೆಯನ್ನು ವಿವರಿಸಿದೆ. ಸರಿಯಾಗಿ ಅದೇ ಸಮಯಕ್ಕೆ ತನ್ನ ಶಿಷ್ಯನನ್ನು ಕಂಡು ಹೋಗೋಣವೆಂದು ಜಗನ್ನಾಥ ಪಂಡಿತನು ಅಲ್ಲಿಗೆ ಬಂದು ಸೇರಿಕೊಂಡ. ಸಂಗತಿ ಸಂದರ್ಭಗಳನ್ನು ತಿಳಿದುಕೊಂಡ. "ರಾಮಾಯಣಕಥೆಯಲ್ಲಿನ ಪಾತ್ರಗಳೊಂದಿಗೆ ಐಕ್ಯವಾಗಿ ಮಹಾಕಾವ್ಯವನ್ನು ರಚಿಸುತ್ತಿರುವನು ಈ ಮಹಾಕವಿ. ಈತನಿಗೆ ನೀವು ವಿಘ್ನಗಳನ್ನುಂಟು ಮಾಡಬೇಡಿ. ಈ ದೀಕ್ಷೆಯಲ್ಲಿರುವಷ್ಟು ಕಾಲವೂ ಆತನಿಗೆ ಯಾವುದೇ ಒಂದು ವಿಧವಾದ ಆಪತ್ತು ಬರದಂತೆ ಕಾಪಾಡುತ್ತಿರಿ. ಈ ಮಹಾನುಭಾವನಿಗೆ ನಾನು ಗುರುವೆನ್ನಿಸಿಕೊಳ್ಳುವುದು ನನ್ನ ಭಾಗ್ಯ' ಎಂದು ಪ್ರಶಂಸೆ ಮಾಡಿದ. ಅದರಿಂದ ಅವರಿಗೆಲ್ಲಾ ಜ್ಞಾನೋದಯವಾಯಿತು. ಆತನು ಹೇಳಿದ ಪ್ರಕಾರ ಅವರು ನಡೆದುಕೊಂಡರು.

ಈ ರೀತಿಯಾಗಿ ಮಹಾಭಕ್ತನಾದ ಏಕನಾಥನಿಂದ ಮಹಾರಾಷ್ಟ್ರ ರಾಮಾಯಣ ಜನಿಸಿ ನಮಗೆ ಮಹಾ ಉಪಕಾರವನ್ನುಂಟು ಮಾಡಿತು.



## “ನಲುಮೆಯನಾಡು”

ನನ್ನದು ನಾಡು ಕನ್ನಡ ನಾಡು
ಅನ್ನವನೀಡುವ ತಾಯ್ನಾಡು ||

ತಂದೆಯ ನಾಡು ಕುಂದದನಾಡು
ಚಂದದ ನಾಡು ಕರುನಾಡು ||

ಎನ್ನಯ ಆಟದ ಎನ್ನಯ ನೋಟದ
ಎನ್ನಯ ಮಾಟದ ಸಿರಿನಾಡು ||

ಚಿನ್ನದ ನಾಡು ಬಣ್ಣದ ನಾಡು
ಎನ್ನಯ ಒಡೆತನದೊಳ್ನಾಡು ||

ಹಿರಿಕಿರಿನದಿಗಳಝುರಿಕೆರಿಕೊಳಗಳ
ತರತರ ಬೆಳೆಗಳ ಚಲುನಾಡು ||

ಬೆಡಗಿನಬನಗಳಗುಡಿಗೋಪುರಗಳ
ಬಿಡಿಗಾಲುವೆಗಳ ಕರುನಾಡು ||

ಸುಳಿವೆಳೆಗಾಳಿಯಗಿಳಿಕೋಗಿಲೆಗಳ
ತಾಣವೆ ಆಗಿಹ ತಾಯ್ನಾಡು ||

ಮಾಮರ ತಂಪಿನ ಮಲ್ಲಿಗೆ ಕಂಪಿನ
ಸೊಂಪನು ಬೀರುವ ಹಿರಿನಾಡು ||

ಕವಿಗಳಕಲಿಗಳಕೋವಿದಗುಣಿಗಳ
ಭೂವರ ಭಕ್ತರ ನೆಲೆವೀಡು ||

ಸುಂದರ ನಾಡು ಮಹಾತ್ಮರಬೀಡು
ಸ್ವಾತಂತ್ರ್ಯಗಳಿಸಿದ ನಲುನಾಡು ||

ಬಿಮಲಾಪುರೆ ತವನಪ್ಪನವರು.

## ಒಗಟುಗಳು

1. ಅಚ್ಚಕ್ಕ, ಹಸುರಕ್ಕ, ಬುಗುಡಿ ಲಿಂಗಕ್ಕ, ಸತ್ತರೆ ಸಾವಿರ, ಹೆಸರು ಇದ್ದರೆ ಒಂದೇ ಹೆಸರು.
2. ದಡಬಡ, ನನ್ನ ಎಡಗೈ ನಿನ್ನ ಹೆಗಲಿಗೆ; ನನ್ನ ಬಲಗೈ ನಿನ್ನ ಬಾಯಿಯೊಳಗೆ. —ಕೆ. ಎಸ್. ಸುಶೀಲ.
3. ಎಲೆ ಉಂಟು ಅಡಿಕೆಯುಂಟು ವೀಳ್ಯ ತಾನಲ್ಲ; ಜಡೆಯುಂಟು ಮುಡಿಯುಂಟು ತಪಸಿಮೊದಲಲ್ಲ. ಒಡಲಲ್ಲಿ ಹಾಲುಂಟು ಕಾಮಧೇನುವಲ್ಲ ಹೇಳಬಲ್ಲ ಜಾಣರಿಗೆ ಸಮನಿಲ್ಲ.
4. ಅತ್ತೆಕಾಯಿ, ಮಾವನಕಾಯಿ, ಸವತಿಕಾಯಿ, ಎಲೆಗೊಂದುಕಾಯಿ, ತಲೆಗೊಂದುಕಾಯಿ, ಜೋಗಿಗೊಂದು ಕಾಯಿ, ಭೋಗಿಗೊಂದು ಕಾಯಿ, ಇದು ಹೇಳಿದವರಿಗೆ ಎಲ್ಲಾ ಕಾಯಿ.

—ಕೆ. ವಿ. ಲೀಲಾ, ಮೈಸೂರು.

## .... .... ಜ್ಞ

1. ಆನೆ ನೀರಾಟದೊಳು ಮೀನ ಕಂಡಂಜುವದೆ ಗೇಣುದ್ದ ಬೆತ್ತದಾಕಿರುಕುಳಕೆ ತಾ ಜಾತಿ ಕೋಣವಂಜುವುದೆ........ಜ್ಞ ?
2. ಕೈಲಾಸ ನೋಳ್ಪುದಕ್ಕೆ ಜಪತಪಗಳೇತಕ್ಕೆ ಬಳಿಯಿರ್ಪ ಮರ ಹತ್ತಿ ಕೈಕಾಲು ಬಿಟ್ಟೊಡೆ ಕೈಲಾಸ ದೊರಕುವುದ........ಜ್ಞ ?
3. ಮುಂದೆಬಂದೀತೆಂದು ಸಂದೇಹಗೊಳಬೇಡ ಬಂದಂದು ನೀ ಪರಿಕ್ಷೆಗೆ ಕೂಡು ಪರಿಣಾಮ ಬಂದಂದೆ ಮರುಗು........ಜ್ಞ ?
4. ಜಾತಿಜಾತಿಗೆ ವೈರ ನೀತಿಮೂರ್ಖಗೆ ವೈರ ಕೋತಿಗಳು ವೈರ ಕೃಷಿಕರಿಗೆ ಬೇನೆಗದು ಲಾತಿಬಹು ವೈರ....—ಜ್ಞ ?

—ಪಿ. ಸೀತಾರಾಮ ಭಟ್ಟ, ಹೆಬ್ರಿ.

# ಮಾಡಿ ನೋಡಿ

ಎರಡು ಬೆಂಕಿಕಡ್ಡಿ ತೆಗೆದುಕೋ. ಅದರಲ್ಲೊಂದರ ಕೊನೆಯನ್ನು ಸ್ವಲ್ಪ ಇಬ್ಭಾಗವಾಗಿ ಮಾಡು. ಎರಡನೇ ಕಡ್ಡಿಯ ಕೊನೆಯನ್ನು ತುಸ ಸಣ್ಣಗೆ ಚೀವು. ಮೊದಲಿನ ಕಡ್ಡಿಯ ಸೀಳಿನಲ್ಲಿ ಎರಡನೇ ಕಡ್ಡಿ ಹೆಚ್ಚಿದ ಭಾಗವನ್ನು ತೂರಿಸು. ಹೀಗೆ ತೂರಿಸಿದರೆ ಅದು ಇಂಗ್ಲೀಷ್ ಅಕ್ಷರ 'ವಿ' (V) ಆಕಾರವನ್ನು ಹೊಂದಬೇಕು. ಈಗ ರೊಟ್ಟೆ ಕೊಯ್ಯುವ



ಚಾಕು ತೆಗೆದುಕೊಂಡು ಮೊನೆಯಾಗಿರುವ ಕಡೆ ಮೇಲಿರುವಂತೆ ಹಿಡಿದುಕೊ. ಹೀಗೆ ಹಿಡಿದಿರುವಾಗ ಚಾಕು ಎತ್ತಕಡೆಯೂ ವಾಲಿರಕೂಡದು. ಮೇಲೆ ಹೇಳಿದ ಬೆಂಕಿ ಕಡ್ಡಿಗಳನ್ನ ಚಾಕುವಿನ ಅಂಚಿನ ಮೇಲಿಟ್ಟು, ಅದರ ಕೆಳ ಭಾಗಗಳು ಮೇಜಿಗೆ ಅಂಟಿಯೂ ಅಂಟದಂತೆ ನಾಜೂಕಾಗಿ ಚಾಕುವನ್ನು ಹಿಡಿ. ಬೆಂಕಿಕಡ್ಡಿ ಚಾಕುವಿನ ಅಂಚಿನ ಮೇಲೆ ನಡೆದುಕೊಂಡು ಬರುವುದು!

* * *

ಎರಡು ಗ್ಲಾಸುಗಳನ್ನು ತೆಗೆದುಕೊ. ಎರಡರಲ್ಲೂ ಸುಮಾರಾಗಿ ನೀರಿನಿಂದ ತುಂಬು. ಒಂದರಲ್ಲಿ ಎಲ್ಲವೂ ಕರಗದೆ ಮಿಗುವಷ್ಟು ಹೆಚ್ಚಾಗಿ ಉಪ್ಪು ಹಾಕು. ಒಂದು ಕೋಳಿ ಮೊಟ್ಟೆ ತಂದು ಸಾದಾನೀರಿರುವ ಗ್ಲಾಸಿನಲ್ಲಿ ಹಾಕು. ಮೊಟ್ಟೆ ಮುಳುಗುತ್ತದೆ. ಆದರೆ ಅದೇ ಮೊಟ್ಟೆಯನ್ನು ಉಪ್ಪುನೀರಿರುವ ಗ್ಲಾಸಿನಲ್ಲಿ ಹಾಕಿದರೆ ಅದು ತೇಲುವುದು; ಮುಳುಗುವುದಿಲ್ಲ.



* * *

ಮತ್ತೊಂದು ಗಮ್ಮತ್ತು. ಮೇಲೆ ತಯಾರು ಮಾಡಿರುವ ಉಪ್ಪುನೀರಿನಲ್ಲಿ ಒಂದು ಸಣ್ಣಗಿರುವ ದಾರವನ್ನು ನೆನೆಸಿ ಒಣಗಿಸು. ಹೀಗೆ ನಾಲ್ಕಾರುತಡವೆ ಉಪ್ಪುನೀರಿನಲ್ಲಿ ತೋಯಿಸಿ ಒಣಗಿಸುತ್ತಿರಬೇಕು. ಈಗ ಆ ದಾರದ ಒಂದು ಕೊನೆಗೆ ರಂಧ್ರವಿರುವ ಮೂರು ಕಾಸನ್ನಾಗಲೀ ಇಲ್ಲ ಪಠಗಳಿಗೆ ತಿರುಗಿಸುವ ಒಂದು ಸಣ್ಣ ರಿಂಗನ್ನಾಗಲೀ ಕಟ್ಟು. ಎರಡನೇ ಕೊನೆಯನ್ನು ಕ್ಲಿಪ್ಪಿನಿಂದ ಹಿಡಿದುಕೊ. ರಿಂಗ್ ಇರುವಕಡೆ ನೇತಾಡುತ್ತಿರಲಿ. ಬೆಂಕಿಕಡ್ಡಿ ಗೀಚಿ ರಿಂಗ್ ಕಟ್ಟಿರುವ ದಾರದ ಕೊನೆಗೆ ಹತ್ತಿಸು. ಚುರಚುರನೆಂದು ಹೊತ್ತಿಕೊಂಡು ಕ್ಲಿಪ್‌ವರೆವಿಗೂ ಉರಿಯುತ್ತದೆ. ಆದರೆ ಅಷ್ಟು ಮಾತ್ರಕ್ಕೆ ನೀವು ಕಟ್ಟಿರುವ ಮೂರುಕಾಸಾಗಲೀ, ರಿಂಗ್ ಆಗಲೀ ಕೆಳಗೆ ಬೀಳುವುದಿಲ್ಲ! ದಾರದಲ್ಲಿ ನೇತಾಡುತ್ತಲೇ ಇರುತ್ತದೆ!!



---

ಒಗಟಿಗೆ ಉತ್ತರ:— 1. ಬಿದಿರುಮೆಳೆ. 2 ನೀರು ತುಂಬುವ ಬಿಂದಿಗೆ. 3. ಆಲದ ಮರ. 4. ಅತ್ತಿಕಾಯಿ, ಮಾವಿನಕಾಯಿ, ಸೌತೆಕಾಯಿ, ಅಡಿಕೆ, ಸೀಗೆಕಾಯಿ, ಸೋರೆಕಾಯಿ, ತೆಂಗಿನಕಾಯಿ.

# ನಾಲ್ಕು ಆಸುಗಳ ಗಮ್ಮತ್ತು!

**ಹೊ**ಸ ಇಸ್ಪೀಟು ಪ್ಯಾಕನ್ನು ತಂದು, ಅದರಲ್ಲಿರುವ ನಾಲ್ಕು ಆಸು ಎಲೆಗಳನ್ನು ಮೊದಲೇ ತೆಗೆದು ನಿಮ್ಮ ಹ್ಯಾಟಿನ ಲೈನಿಂಗ್ ಕ್ಲಾತಿನೊಳಗಡೆ ಜಾಗರೂಕತೆಯಿಂದ ಬಚ್ಚಿಡಬೇಕು. ತರುವಾಯ ಪ್ರೇಕ್ಷಕರಲ್ಲೊಬ್ಬನಿಗೆ ಚೆನ್ನಾಗಿ ಕಲೆಸಿಕೊಡುವಂತೆ ಹೇಳಿ ಆ ಪ್ಯಾಕನ್ನು ಕೊಡಬೇಕು. ಪ್ರೇಕ್ಷಕನು ಸಹಜವಾಗಿ ಅದರಲ್ಲಿ 52 ಎಲೆಗಳಿರುವುವೆಂದೇ ತಿಳಿಯುವನೇ ಹೊರತು 48 ಮಾತ್ರ ಇರುವುದೆಂದು ಊಹಿಸಲಾರ. ಏಕೆಂದರೆ ಪ್ರೇಕ್ಷಕರಲ್ಲಿ ಯಾರಿಗೂ ಆರೀತಿ ಸಂದೇಹವುಂಟಾಗುವುದೂ ಇಲ್ಲ; ಅಥವಾ ಆ ಎಲೆಗಳನ್ನೆಲ್ಲಾ ಎಣಿಸುವ ತಾಳ್ಮೆಯೂ ಇರುವುದಿಲ್ಲ. ಆತನು ಪ್ಯಾಕನ್ನು ಕಲೆಸಿಕೊಟ್ಟ ಮೇಲೆ ಇಂದ್ರಜಾಲಕನು ಹ್ಯಾಟಿನಲ್ಲಿ ಯಾವ ಮಾಯ ಮಂತ್ರವೂ ಇಲ್ಲವೆಂದು ಪ್ರೇಕ್ಷಕರಿಗೆ ದೃಢಮಾಡಿ ಕೊಡಬೇಕು. ಲೈನಿಂಗ್ ಕ್ಲಾತಿನಡಿಯಲ್ಲಿರುವ ಆಸುಗಳು ಅವರಿಗೆ ಕಾಣಿಸುವುದಿಲ್ಲ. ಆದ್ದರಿಂದ ಪ್ರೇಕ್ಷಕರಿಗೆ ಖಾಲಿ ಹ್ಯಾಟು ಮಾತ್ರ ಕಾಣಿಸುವುದು. ಪ್ಯಾಕ್ ಎಲೆಗಳನ್ನು ಹ್ಯಾಟಿನೊಳಗೆ ಹಾಕಿ ಮತ್ತೆ ಚೆನ್ನಾಗಿ ಕಲೆಸಿ, ಇಂದ್ರಜಾಲಕನ ಕೈಗೆ ಕೊಡಬೇಕು. ಇನ್ನೂ ಬಂದೋಬಸ್ತಾಗಿರಬೇಕಾದರೆ ಹ್ಯಾಟಿನಮೇಲೆ ಒಂದು ಕೈಚೌಕ ಮುಚ್ಚಿ, ಇಂದ್ರಜಾಲಕನು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು, ಕೈಚೌಕದ ಕೆಳಗೆ ಕೈ ಹಾಕಿ ನಾಲ್ಕು ಆಸುಗಳನ್ನೂ ಹೊರಗೆ ತೆಗೆದು ತೋರಿಸಬೇಕು.

ಪಾಠಕರು ಈ ಯುಕ್ತಿಯನ್ನು ಮನೆಯಲ್ಲಿ ಅಭ್ಯಾಸ ಮಾಡಿದ ತರುವಾಯವೇ ಇತರರಿಗೆ ತೋರಿಸುವುದು ಉತ್ತಮ. ಇದನ್ನು ಚಾಕಚಕ್ಯದಿಂದ ನೀವು ಪ್ರದರ್ಶಿಸುವುದರಲ್ಲೆ ವಿನೋದವೆಲ್ಲಾ ಆಧಾರಹೊಂದಿದೆ.

---

ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳ ಬಯಸಿದರೆ, ಅವರು 'ಚಂದಮಾಮ' ಹೆಸರು ಸೂಚಿಸಿ ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಇಂಗ್ಲೀಷ್ ಭಾಷೆಯಲ್ಲಿ ಬರೆಯಬಹುದು ಅವರ. ವಿಳಾಸ.

ಪ್ರೊಫೆಸರ್ ಪಿ. ಸಿ. ಸರ್ಕಾರ್ ಮೆಜಿಷಿಯನ್,

12/3/A, ಜಮೀರ್ ಲೇನ್, ಬಾಲಿಗಂಜ್ ಕಲಕತ್ತಾ-19.



# 'ಬಣ್ಣ ಹಾಕಿ' ಮೂರನೇ ಚಿತ್ರದ ಕಥೆ

ಕಷ್ಟಸಾಧ್ಯವಾದ ಮಂಜಿನಬೆಟ್ಟವನ್ನು ಹೇಗೋ ಒಂದು ರೀತಿಯಲ್ಲಿ ರಾಜಕುಮಾರ ಹತ್ತಿದ. ಬೆಟ್ಟದಮೇಲೆ ಭವನ ಕಾಣಿಸಿತು. ಆ ಭವನದೊಳಕ್ಕೆ ಹೋಗಲು ಒಂದು ಮಹಾದ್ವಾರ ಕಾಣಿಸಿತು. ಅದು ತೆರೆದೇ ಇದ್ದುದರಿಂದ ಸುಲಭವಾಗಿ ಪ್ರವೇಶ ಮಾಡಬಹುದೆಂದು ಎಣಿಸಿದ್ದ ರಾಜಕುಮಾರ. ತೀರಾ ಹೊಸ್ತಿಲಿನ ಹತ್ತಿರ ಕಾಲಿಟ್ಟಕೂಡಲೇ ಒಂದು ಕೋಟಿ ಸಿಂಹಗಳು ಅರ್ಭಟಿಸಿದಂತೆ ಧ್ವನಿ ಕಿವಿಗಳಲ್ಲಿ ಪ್ರತಿಧ್ವನಿಸಿತು. ಆದರದು ಎಲ್ಲಿಂದ ಬರುತ್ತಿದೆ, ಹೇಗೆ ಬರುತ್ತಿದೆ ಎಂಬ ವಿಷಯಗಳು ಎಷ್ಟೇ ಪ್ರಯತ್ನಪಟ್ಟರೂ ತಿಳಿಯಲಾರದೆ ಹೋದ. ಇದು ಯಾವುದೋ ಅದೃಶ್ಯ ರೂಪದಲ್ಲಿರುವ ಮಹಾಶಕ್ತಿಯೆಂದು ನಿಶ್ಚಯಿಸಿ, ಧೈರ್ಯದಿಂದ ಮುಂದಕ್ಕೆ ಹೆಜ್ಜೆ ಇಡಲು ಸದ್ದು ಅಡಗಿತು.

ಇದು ದಾಟಿಯಾದಮೇಲೆ ತುಸ ದೂರದಲ್ಲಿ ಮತ್ತೂ ದೊಡ್ಡದಾದ ಬೇರೊಂದು ದ್ವಾರ ಕಾಣಿಸಿತು. ಇಲ್ಲಿ ಕಾಲಿಟ್ಟಕೂಡಲೇ ಕಣ್ಣುಗಳು ಕೋರೈಸುವಂತೆ ಭೀಕರವಾದ ಜ್ವಾಲೆಗಳು ಕಾಣಬಂದವು. ಏನಾದರಾಗಲೀ ಎಂದು ಆತನು ಹಿಂದೆಗೆಯದೆ ಸಾಹಸದಿಂದ ಜ್ವಾಲೆಗಳಲ್ಲಿ ಪ್ರವೇಶ ಮಾಡಿದ. ಜ್ವಾಲೆಗಳು ಮಾಯವಾದವು.

ಮತ್ತೆ ಸ್ವಲ್ಪ ದೂರ ಹೋಗಲು ತನ್ನ ಕಣ್ಣುಗಳನ್ನು ತಾನೇ ನಂಬಲಾಗದಷ್ಟು ಒಂದು ವಿಚಿತ್ರವಾದ ಕೊಳಕಾಣಿಸಿತು. ಕೊಳದ ಎದುರಾಗಿ ಬ್ರಹ್ಮಾಂಡವಾದ ಮೂರನೇ ದ್ವಾರ ಕಾಣಿಸುತ್ತಿತು. ಆದರೆ ನೀರು ಎಷ್ಟು ಆವಾಳಗಿದೆಯೋ ತಿಳಿಯದೆ ಇಳಿಯುವುದಾದರೂ ಹೇಗೆ? ಆದಾಗ್ಯೂ ಧೈರ್ಯಮಾಡಿ ಇಳಿಯಲು ಹೋದ. ನಿಜವಾಗಿ ಅಲ್ಲಿ ನೀರೇ ಇರಲಿಲ್ಲ. ಆದರೆ ಕಾಲು ಮಾತ್ರ ಜಾರಿದಂತಾಯಿತು. ಇದೂ ಒಂದು ಮಾಯೆಯೇ ಇರಬೇಕೆಂದುಕೊಂಡು ಆ ಮಾಯಾಕೊಳವನ್ನು ದಾಟಿ ಮೂರನೇ ದ್ವಾರ ಸೇರಿಕೊಂಡ.

ಆವೇಳೆಗೆ ರಾಜಕುಮಾರನಿಗೆ ತುಂಬಾ ಆಯಾಸವಾಗಿತ್ತು. ಆದರೂ ಹಠಬಿಡಲಿಲ್ಲ. ದ್ವಾರವನ್ನು ದಾಟಿದಕೂಡಲೇ ತಾನು ಯಾರಿಗಾಗಿ ಹುಡಿಕಿಕೊಂಡು ಹೋದನೋ ಆ ಮಹಾನುಭಾವನು ಒಂದು ವಿಶಾಲವಾದ ಕೊಠಡಿಯಲ್ಲಿ ಧ್ಯಾನಮಾಡುತ್ತಿರುವುದು ಕಾಣಿಸಿತು. ಅಮಾವಾಸ್ಯೆ ಇನ್ನೂ ಇದೆ, ಈಗಲೋ ಆಗಲೋ ಆ ಮಹಾನುಭಾವನು ಎಚ್ಚರಗೊಂಡು ತನ್ನ ಸಂಗಡ ಮಾತನಾಡುತ್ತಾನೆ ಎಂದು ರಾಜಕುಮಾರ ಶಬ್ದ ಮಾಡದೆ ಕೋಣೆಯ ಒಂದು ಮೂಲೆಯಲ್ಲಿ ನಿಂತುಕೊಂಡ. ಆಗಾಗಲೇ ಅಮಾವಾಸ್ಯೆ ಕಳೆದು, ಪಾಡ್ಯಮಿ ಬಂತೆಂದೂ, ಮಹಾನುಭಾವನು ಮತ್ತೆ ಜಪದಲ್ಲಿ ಕುಳಿತಿರುವನೆಂದೂ ಆತನಿಗೆ ತಿಳಿಯದು!

ದಿನಗಟ್ಟಲೆ ನಿದ್ರಾಹಾರಗಳನ್ನು ಕಾಣದ ರಾಜಕುಮಾರ ಬಳಲಿಕೆಯಿಂದ ಸೊರಗಿ ತನ್ನ ಅರಿವಿಲ್ಲದೆಯೇ ಆ ಮಹಾನುಭಾವನಮೇಲೆ ಬಿದ್ದುಬಿಟ್ಟ. ಮಹಾನುಭಾವನು ಕಣ್ಣುಗಳನ್ನು ಮುಚ್ಚಿಕೊಂಡೇ ಬಲಗೈಮೇಲಕ್ಕೆ ಎತ್ತಿದ. ತಕ್ಷಣವೇ ರಾಜಕುಮಾರನು ನೆಟ್ಟಗೆ ಹೋಗಿ ಭವನದ ಮಾಡಿಗೆ ನೇತಾಡುತ್ತಿದ್ದ.




ಬಣ್ಣ ಹಾಕಿರಿ (ಕಥೆ) : 4-ನೆ ಬೊಂಬೆ

# ಇಬ್ಬರು ಕುಡುಕರು



ಸೋಮನಹಳ್ಳಿಯಲ್ಲಿ ಕಗ್ಗ, ಮಗ್ಗ ಎಂಬ ಇಬ್ಬರು ಹೆಂಡಕುಡುಕರಿದ್ದರು. ಇವರಿಗೆ ಇಬ್ಬರೂ ಸೇರಿ ವ್ಯಾಪಾರ ಮಾಡಲು ಆಶೆಯಾಯಿತು. ಆದುದರಿಂದ ಇಬ್ಬರೂ ಕಷ್ಟಪಟ್ಟು ಒಂದು ಪೀಪಾಯಿ ತುಂಬಾ ಹೆಂಡವನ್ನು ಭಟ್ಟಿ ಇಳಿಸಿ ತುಂಬಿಸಿ ನೆರೆಊರಿನ ರಂಗಪುರದ ಸಂತೆಯಲ್ಲಿ ಮಾರಲು ಹೊರಟರು. ಗಾಡಿಯನ್ನು ಬಾಡಿಗೆಗೆ ಪಡೆದು ಪೀಪಾಯಿಯನ್ನು ಸಾಗಿಸಿಕೊಂಡು ಹೊರಟರು.

ದಾರಿಯಲ್ಲಿ ಕಗ್ಗನಿಗೆ ಹೆಂಡಕುಡಿಯಲು ಆಸೆಯಾಯಿತು. "ನಾವು ವ್ಯಾಪಾರ ಮಾಡುವವರಾದ್ದರಿಂದ ಹೆಂಡವನ್ನು ದುಡ್ಡು ಕೊಟ್ಟು ಕುಡಿಯಬೇಕು" ಎಂದು ಮಾತನಾಡಿಕೊಂಡರು. ಆದುದರಿಂದ ಕಗ್ಗನು ತನ್ನ ಜೇಬನ್ನೆಲ್ಲಾ ಹುಡುಕಿ ಒಂದು ಸಮುಕಲು ಆಣೆಯನ್ನು ತೆಗೆದು ಮಗ್ಗನ ಕೈಯಲ್ಲಿಟ್ಟು ಸ್ವಲ್ಪ ಹೆಂಡ ಕುಡಿದನು. ಸ್ವಲ್ಪ ದೂರ ಮುಂದೆ ಹೋದನಂತರ ಮಗ್ಗನಿಗೂ ಕುಡಿಯಲು ಆಸೆಯಾಯಿತು. ಸರಿ, ತಾನು ಸಂಪಾದಿಸಿದ್ದ ಆ ಸಮುಕಲು ಆಣೆಯನ್ನು ಕಗ್ಗನಿಗೆಕೊಟ್ಟು ಯಥೇಚ್ಛ ಹೆಂಡ ಕುಡಿದನು. ಮತ್ತೆ ಕಗ್ಗನು ಅದೇ ಆಣೆ ಮಗ್ಗನಿಗೆ ಕೊಟ್ಟು ಪುನಃ ಸಾರಾಯಿ ಕುಡಿದನು. ಇದೇ ರೀತಿ ಇಬ್ಬರೂ ಮಾಡುತ್ತಾ ಸಂತೆಯ ಬೈಲಿಗೆ ಬರುವವೇಳೆಗೆ ಪೀಪಾಯಿ ಬರಿದು ಮಾಡಿದರು. ಕಗ್ಗನ ಸಮುಕಲು ಆಣೆ ಕಗ್ಗನ ಬಳಿಯೇ ಉಳಿಯಿತು. ಇಬ್ಬರೂ ಮುಖ ಮುಖನೋಡಿಕೊಂಡು ತಮ್ಮ ವ್ಯಾಪಾರ ಹೀಗಾದುದಕ್ಕೆ ಮರುಗಿ ತಮ್ಮ ಅವಿವೇಕಕ್ಕೆ ವ್ಯಸನಪಟ್ಟು ಹಿಂತಿರುಗಿದರು.

—ಯು. ಸೀತಾರಾಮು, ಕೂಡ್ಲಿಗಿ.

# ಒಂದೇ ಗೆರೆಯ ಚಿತ್ರ



ಬರೆದವರು :

R. K. ಬಾಲಾಂಬ, ಮದರಾಸು.

# ಮುಖಚಿತ್ರ



ಪೌಂಡ್ರಕವಾಸುದೇವನೆಂಬ ರಾಜನು ಕರೂಶದೇಶವನ್ನು ಆಳುತ್ತಿದ್ದನು. ಅವತಾರಪುರುಷನಾದ ಶ್ರೀಕೃಷ್ಣನಿಗಿರುವ ಅನೇಕ ಹೆಸರುಗಳಲ್ಲಿ ವಾಸುದೇವನೆಂಬುದೂ ಒಂದು. ಈ ವಿಷಯ ತಿಳಿದು, ಪೌಂಡ್ರಕನು ಅಸೂಯೆಗೊಂಡನು. ಮೂರ್ಖತೆಯಿಂದ ಕೃಷ್ಣನಮೇಲೆ ಹಗೆಸಾಧಿಸಿದನು.

ಆತನು ಸುಮ್ಮನಿರಲಾರದೆ ಒಂದು ದಿನ ದೂತನೊಬ್ಬನನ್ನು ಕರೆದು "ಯಾರೋ ಕೃಷ್ಣನಂತೆ. ಗೋಪಾಲಕನಂತೆ. ವಾಸುದೇವನೆಂಬ ನನ್ನ ನಾಮವನ್ನಿಟ್ಟುಕೊಂಡು ತಿರುಗಾಡುತ್ತಿರುವನಂತೆ. ವಾಸುದೇವನೆಂಬ ಬಿರುದು ನನಗೆ ಸಲ್ಲುವುದೇ ಹೊರತು ಮತ್ತೊಬ್ಬರಿಗೆ ಆ ಅರ್ಹತೆಯಾದರೂ ಎಲ್ಲಿದೆ? ಆದುದರಿಂದ ನೀನು ಈಗಲೇ ಆ ಕೃಷ್ಣನ ಹತ್ತಿರಕ್ಕೆ ಹೋಗಿ ನಾನು ಹೇಳಿದಂತೆ ಈ ರೀತಿ ಹೇಳು; 'ಎಲವೋ, ಹುಡುಗಾ, ಜಾತಿಮರ್ಯಾದೆಗಳನ್ನು ಮೀರಿ, ನೀನು ನನ್ನ ಹೆಸರನ್ನಿಟ್ಟುಕೊಂಡು ಜೀವಿಸುತ್ತಿರುವೆಯಂತೆ. ಇದು ನಿನಗೆ ಉಚಿತವಲ್ಲ. ತಿಳಿದೋ ತಿಳಿಯದೆಯೋ, ಹುಡುಗುತನದಿಂದ ಈ ಕೆಲಸ ಮಾಡಿರಬಹುದು. ಈಗಲಾದರೂ ಬುದ್ಧಿ ತಂದುಕೊಂಡು, ನೀನು ಧರಿಸಿರುವಂಥ ನನ್ನ ರಾಜ ಚಿಹ್ನೆಗಳನ್ನು ತ್ಯಜಿಸು. ಆ ಶಂಖ ಚಕ್ರ, ಅದೂ ಇದೂ, ತೆಗೆದುಹಾಕಿ ನನಗೆ ಶರಣಾದ ಪಕ್ಷಕ್ಕೆ ನಿನ್ನನ್ನು ಕ್ಷಮಿಸುವೆನು' ಎಂದು ಹೇಳಿ ಬಾ, ಹೋಗು" ಎಂದು ಕಳುಹಿಸಿದನು.

ದೂತನು ನೆಟ್ಟಗೆ ಹೋಗಿ, ತುಂಬಿದ ಸಭೆಯಲ್ಲಿದ್ದ ಶ್ರೀಕೃಷ್ಣನಿಗೆ ಈ ವರ್ತಮಾನ ತಿಳಿಸಿದನು. ಆತನು ಹೇಳಿದ ಮಾತನ್ನು ಕೇಳಿ ಕೃಷ್ಣನು ಪಕಪಕನೆಂದು ನಕ್ಕುಬಿಟ್ಟ. ಸಭೆಯಲ್ಲಿದ್ದವರೆಲ್ಲಾ ಆಶ್ಚರ್ಯಗೊಂಡರು. ಶ್ರೀಕೃಷ್ಣನು ದೂತನನ್ನು ಉಚಿತರೀತಿಯಲ್ಲಿ ಸತ್ಕರಿಸಿ, "ಎಲೈ ನಾನು ಶೀಘ್ರವಾಗಿ ಬರುವೆನೆಂದು ನಿನ್ನ ಯಜಮಾನನಿಗೆ ಹೇಳು. ಯುದ್ಧರಂಗದಲ್ಲಿ ಆತನ ಶರೀರವು ನಾಯಿ, ನರಿ, ಹದ್ದುಗಳಿಗೆ ಆಹಾರವಾದಾಗ ನಾನು ಈ 'ವಾಸುದೇವ' ನೆಂಬ ಬಿರುದನ್ನು ತ್ಯಜಿಸುವಂತೆ ಕೇಳಲಿ, ಹೋಗು" ಎಂದನು.

ಈ ಮಾತುಗಳನ್ನು ಕೇಳಿ ದೂತನು ಹೆದರಿ, ಓಡಿಹೋಗಿ ಪೌಂಡ್ರಕನಿಗೆ ತಿಳಿಸಿದ. ಕೂಡಲೇ ಪೌಂಡ್ರಕನು ಅಸಲು ಕೃಷ್ಣನಂತೆ ಕಾಣುವಹಾಗೆ ವೇಷಧರಿಸಿದ. ಎರಡು ಅಕ್ಷೌಹಿಣಿ ಸೈನ್ಯ ಸಿದ್ಧಮಾಡಿದ. ಮತ್ತೆ ಮೂರು ಅಕ್ಷೌಹಿಣಿ ಸೈನ್ಯದೊಂದಿಗೆ ಆತನ ಮಿತ್ರ ಕಾಶೀರಾಜ ಸಹಾಯಕ್ಕೆ ಬಂದ. ವಾಸುದೇವನಿಗೂ ಪೌಂಡ್ರಕವಾಸುದೇವನಿಗೂ ಘೋರ ಯುದ್ಧ ನಡೆಯಿತು. ಬಿರುಸಾಗಿ ಕಾದಾಟವಾದ ಮೇಲೆ, ಕೃಷ್ಣನ ಕೈಯಲ್ಲಿ ಪೌಂಡ್ರಕನು ಹತನಾದನು. ಅವನ ಸಹಾಯಕ್ಕೆ ಬಂದ ಕಾಶೀರಾಜನನ್ನು ಬಾಣದಿಂದ ಹೊಡೆಯಲು, ಅವನ ತಲೆ ಹಾರಿ, ನೆಟ್ಟಗೆ ಅವನ ಸ್ವಂತ ಕಾಶೀಪಟ್ಟಣದ ಕೋಟೆಯ ಮುಂದೆ ಬಿದ್ದಿತು.

Controlling Editor : SRI CHAKRAPANI

Printed and Published by B. NAGI REDDI at the B. N. K. Press Ltd., Madras





Photo by N. Ramakrishna

ಪರಮಾನಂದ




ಬಣ್ಣ ಹಾಕಿರಿ (ಕಥೆ) : 3 - ನೆ ಬೊಂಬೆ